




ಸಂಪುಟ : ೪೭ ಅಕ್ಟೋಬರ್ ೨೦೧೧ ಸಂಚಿಕೆ : ೧೦



ಮುಖ್ಯಮಂತ್ರಿ ಶ್ರೀ ಡಿ.ವಿ. ಸದಾನಂದಗೌಡ ಅವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯರಿಂದ ದಿವ್ಯಾಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು, ಸಚಿವರಾದ ಶ್ರೀ ವಿ. ಸೋಮಣ್ಣ, ಶ್ರೀ ರೇಣುಕಾಚಾರ್ಯ, ಶಾಸಕರಾದ ಶ್ರೀ ಸುರೇಶ್‌ಗೌಡ, ಶ್ರೀ ಸೊಗಡು ಶಿವಣ್ಣ, ಶ್ರೀ ಬೇಳೂರು ಗೋಪಾಲಕೃಷ್ಣ ಮೊದಲಾದ ಗಣ್ಯರು ಉಪಸ್ಥಿತರಿದ್ದರು




ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದಲ್ಲಿ ನಡೆದ '೨ನೇ ಗ್ರ್ಯಾಜುಯೇಷನ್‌ಡೆ' ಸಮಾರಂಭದಲ್ಲಿ ಪೂಜ್ಯ ಶ್ರೀಗಳು ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಪ್ರಶಸ್ತಿ ನೀಡಿ ಆಶೀರ್ವದಿಸಿದರು




ಎಸ್.ಬಿ.ಎಂ. ನಿರ್ದೇಶಕರಾದ ಶ್ರೀ ಕೊಪ್ಪಲ್ ನಾಗರಾಜ್ ಅವರು ಶ್ರೀಮಠದಲ್ಲಿ ನಿರ್ಮಿಸಿದ ಶುದ್ಧೀಕರಿಸಿದ ಕುಡಿಯುವ ನೀರಿನ ಸೌಲಭ್ಯವನ್ನು ಪೂಜ್ಯ ಶ್ರೀಗಳವರು ಉದ್ಘಾಟಿಸಿದರು. ಶ್ರೀ ಸಂದರ್ಭದಲ್ಲಿ ಶ್ರೀ ನಾಗರಾಜ್‌ರವರ ತಂದೆ ತಾಯಿ ಹಾಗೂ ಕುಟುಂಬ ವರ್ಗದವರು ಉಪಸ್ಥಿತರಿದ್ದರು





॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಾಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೪೭ ಅಕ್ಟೋಬರ್ ೨೦೧೧ ಸಂಚಿಕೆ : ೧೦



ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪


## ಒಳಪುಟಗಳಲ್ಲಿ ..................


೨. ಸಂಪಾದಕೀಯ
೩. ಶ್ರೀವಾಣಿ
೪. ಸಿದ್ಧಲಿಂಗೇಶ್ವರ ವಚನ –ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ
೫. ಸರಸ್ವತಿ –ಡಾ॥ ಸಿ.ಪಿ. ಕೃಷ್ಣಕುಮಾರ್
೬. ಉನ್ನತ ಸ್ಥಾನದಲ್ಲಿರುವವರ ಜವಾಬ್ದಾರಿ –ನ್ಯಾ. ರಾಮಾ ಜೋಯಿಸ್
೮. ಮಹಾತ್ಮಗಾಂಧೀಜಿಯವರ ಬದುಕಿನಾದರ್ಶಗಳು –ಯೋಗೀಶ್ ನಿರ್ವಿಕಲ್ಪ
೧೧. ವಿಶ್ವಕ್ಕೆ ಮಾದರಿಯಾದ ವ್ಯಕ್ತಿತ್ವ ಸರ್.ಎಂ. ವಿಶ್ವೇಶ್ವರಯ್ಯ –ಯು.ಎನ್. ಸಂಗನಾಳಮಠ
೧೫. ವಿಶ್ವದ ಅನುಭಾವಿಗಳ ಸಂತರಲ್ಲಿ ಕಂಗೊಳಿಸುವ ರತ್ನತ್ರಯರು –ಡಾ॥ ಆರ್.ಬಿ. ಚಿಲುಮಿ
೨೦. ನೈತಿಕ ಶಿಕ್ಷಣ –ಕವಿತಾಕೃಷ್ಣ
೨೩. ಶಿವಶರಣ ಹರಳಯ್ಯ –ಹೆಚ್. ಕಮಲ
೨೫. ದೇಶಕ್ಕೇನೋ ಸ್ವಾತಂತ್ರ್ಯ ಲಭಿಸಿತು; ಆದರೆ ಜನತೆಗೆ? –ಎಸ್. ರೇಣುಕಾರಾಧ್ಯ
೨೭. ಕ್ಷೇತ್ರವಾರ್ತೆ
೨೮. ಹಣ್ಣುಗಳೂ ಕವಚದ ಬೀಜಗಳೂ(ನಟ್ಸ್) –ವಾಮನರಾವ್ ಹೊದಿಕೆ
೨೯. ತೀವ್ರರೋಗಗಳಲ್ಲಿ ನಿಸರ್ಗೋಪಚಾರ –ಜಿ.ವಿ. ವೆಂಕಟನಾರಾಯಣಶಾಸ್ತ್ರಿ
೩೨. ಜಾಹೀರಾತು





ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

# ಗಾಂಧಿ ಜಯಂತಿ

"ಭಾರತದ ಸ್ವಾತಂತ್ರ್ಯ ಸಾಧನೆಯೇ ನನ್ನ ಜೀವಿತೋದ್ದೇಶ. ಅದಕ್ಕಾಗಿ ನಾನು ಸಾಯಲೂ ಕೂಡ ಸಿದ್ಧ. ಏಕೆಂದರೆ ಭಾರತದ ಸ್ವಾತಂತ್ರ್ಯ ಸತ್ಯದ ಒಂದು ಅಂಶ. ಬಂಧವಿಮುಕ್ತವಾದಾಗಲೇ ಭರತಖಂಡ ಸತ್ಯಸ್ವರೂಪವಾದ ಭಗವಂತನನ್ನು ಪೂಜಿಸ ಬಲ್ಲದು. ಭಾರತದ ಬಿಡುಗಡೆಗಾಗಿ ನಾನು ದುಡಿಯುತ್ತಿದ್ದೇನೆ. ಏಕೆಂದರೆ ಭಾರತದಲ್ಲಿ ಬದುಕಿ ಅದರ ಸಂಸ್ಕೃತಿಯನ್ನು ಪಡೆದಿರುವುದರಿಂದ ಅದರ ಸೇವೆಗೆ ನಾನು ಅತ್ಯಂತ ಅರ್ಹ ಎಂಬುದನ್ನು, ನನ್ನ ಸೇವೆಯ ಮೊದಲ ಹಕ್ಕು ಭಾರತದ್ದು ಎಂಬುದನ್ನು ನನ್ನ ಸ್ವದೇಶಿ ಧರ್ಮ ನನಗೆ ಕಲಿಸಿದೆ. ನನ್ನ ದೇಶಭಕ್ತಿ ಭಾರತಕ್ಕೆ ಮಾತ್ರ ಮೀಸಲಾಗಿಲ್ಲ. ಬೇರೆ ಯಾವ ದೇಶದ ಹಿತಕ್ಕೂ ಹಾನಿಯಾಗಬಾರದು ಎಂಬುದಷ್ಟೇ ಅಲ್ಲ, ಸಕಲ ದೇಶಗಳಿಗೂ ಆ ಪದದ ಸಂಪೂರ್ಣಾರ್ಥದಲ್ಲಿ ಸರ್ವಲಾಭ ಲಭಿಸಬೇಕು ಎಂಬುದೇ ನನ್ನ ಮಾತಿನ ಆಶಯ. ನಾನು ಸಂಕಲ್ಪಿಸಿರುವ ಭಾರತದ ಸ್ವಾತಂತ್ರ್ಯ ಎಂದಿಗೂ ಲೋಕಹಿತಕಂಟಕವಾಗಲಾರದು"- ಎಂದು ಬರೆಯುತ್ತಾರೆ ತಮ್ಮ ಆತ್ಮಕಥೆಯಲ್ಲಿ ಗಾಂಧೀಜಿಯವರು.

ಗಾಂಧಿಜಯಂತಿಯನ್ನು ಆಚರಿಸುತ್ತಿರುವ ಈ ಸಂದರ್ಭದಲ್ಲಿ ಪ್ರತಿಯೊಬ್ಬ ಭಾರತೀಯನು ಈ ಮೇಲಿನ ಗಾಂಧೀಜಿಯವರ ಮಾತುಗಳನ್ನು, ಅವುಗಳ ಅಂತರಾರ್ಥವನ್ನು ಮನಗಾಣಬೇಕಾಗಿದೆ; ಕೇವಲ ಮನಗಂಡರೆ ಸಾಲದು ಆಚರಣೆಗೆ ತರಬೇಕಾಗಿದೆ. ಸ್ವಾತಂತ್ರ್ಯ ಸಿಕ್ಕಿದೆ. ಆ ಪುಣ್ಯಾತ್ಮನ ಅಹಿಂಸಾತ್ಮಕ ಧೀಶಕ್ತಿಯ ಪ್ರತಿಫಲವಾಗಿ. ಸತ್ಯ ಬೇರೆಯಲ್ಲ, ಅಹಿಂಸೆ ಬೇರೆಯಲ್ಲ. ಇಂದು ನಮ್ಮನ್ನಾಳುವ ಜನನಾಯಕರ ಜೀವನಶೈಲಿ ಗಾಂಧೀಜಿಯ ಮಾರ್ಗದಲ್ಲಿ ಮುಂದುವರಿದಿದೆಯೇ? ಇವರೆಲ್ಲ ದೊಡ್ಡವರು! ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪನವರ ಮಾತು ನೆನಪಾಗುತ್ತದೆ. "ಅನಾವರಣವಾಯಿತಂತೆ ಗಾಂಧೀಜಿಯ ಚಿತ್ರಕೆ । ಸತ್ತ ಗಾಂಧಿ ಅತ್ತನೇನೋ ನಡೆದ ವಿಚಿತ್ರಕೆ". ಗಾಂಧೀಜಿಯೆತ್ತ? ಇಂದು ನಾವೆತ್ತ ?

-ಸಂಪಾದಕ







# ಉಪಕಾರ ಸ್ಮರಣೆ

ಇದು ನಡೆದ ಘಟನೆ. ಹೀಗೂ ಉಂಟೆ ಎನ್ನುವಂತಹುದು. ಸ್ಮರಣೆ ಉಪಕಾರ ಸ್ಮರಣೆಯಂಥ ಸದ್ಗುಣಗಳು ಮನುಷ್ಯಮಾತ್ರರಿಗೆ ಮಾತ್ರ ಸೀಮಿತವೆನ್ನುವಂತಲ್ಲ. ಪ್ರಾಣಿಗಳಲ್ಲೂ ಕಾಣಬಹುದಾದವು. ಸಾಕುಪ್ರಾಣಿಗಳಲ್ಲಿ ಕಾಣಬರುವ ಉಪಕಾರ ಸ್ಮರಣೆ ಮನುಷ್ಯನಲ್ಲೂ ಕಾಣಸಿಗದಂತಾಗಿರುವುದು ದುರ್ದೈವ. ಎಲ್ಲಿ ನೋಡಿದರೂ, ಎತ್ತ ನೋಡಿದರೂ 'ಕೃತಘ್ನ'ರೇ ತಾಂಡವವಾಡುತ್ತಿರುವ ಇಂದಿನ ದಿನಮಾನಗಳಲ್ಲಿ ರೈತನೊಬ್ಬನ ಜೀವನದಲ್ಲಿ ಜರುಗಿದ ಪ್ರಸಂಗ ಹೃದಯವನ್ನು ಆರ್ದ್ರಗೊಳಿಸುತ್ತದೆ.

ಶ್ರೀಮಠದ ಜಾತ್ರೆಗೆ ಒಬ್ಬ ರೈತ ತಾನು ಪ್ರೀತಿಯಿಂದ ಸಾಕಿ, ಸಲಹಿದ ಆರೈಕೆ ಮಾಡಿ ತನ್ನ ಮಕ್ಕಳಂತೆ ಬೆಳೆಸಿದ್ದ ಸುಲಕ್ಷಣವಾದ, ಸದೃಢವಾದ, ದುಡಿದು ಗಟ್ಟಿ ಮುಟ್ಟಾಗಿದ್ದ ಒಂದು ಜೊತೆ ಎತ್ತುಗಳನ್ನು ಮಾರಾಟ ಮಾಡಲು ತಂದಿದ್ದ. ಹತ್ತಾರು ದಿನ ಶ್ರೀ ಜಾತ್ರೆಯಲ್ಲಿ ಅವುಗಳೊಡನೆ ತಂಗಿದ್ದ. ಆ ಎತ್ತುಗಳನ್ನು ಕೊಳ್ಳಲು ಬಂದವರೆಲ್ಲರೂ ಅವುಗಳನ್ನು ಹೊಗಳಿದ್ದೇ ಹೊಗಳಿದ್ದು. ಸುಳಿಶುದ್ಧವಾಗಿದ್ದ ಅವುಗಳು ಬಂದವರೆಲ್ಲರ ಪ್ರಶಂಸೆಯ ಮಾತುಗಳು ತಮಗೆ ಅರ್ಥವಾಗುತ್ತವೆಯೇನೋ ಎಂಬಂತೆ ಕಿವಿ ನಿಮಿರಿಸಿಕೊಂಡು ಕೇಳುತ್ತಿದ್ದವು. ಅವುಗಳನ್ನು ಕೊಂಡುಕೊಳ್ಳುವ ಭಾಗ್ಯವಂತರಾರೂ ಕಾಣಲಿಲ್ಲ. ಜಾತ್ರೆ ಮುಗಿದು ರೈತ ತನ್ನೂರಿಗೆ ಅವುಗಳನ್ನು ಹೊಡೆದುಕೊಂಡು ಹಿಂತಿರುಗುತ್ತಿದ್ದಾಗ ಒಂದು ನಂಬಲಾಗದ ಆದರೆ ನಂಬಲೇಬೇಕಾದ ಪ್ರಸಂಗ ನಡೆಯಿತು. ಊರಿಗೆ ಹಿಂತಿರುಗುತ್ತಿದ್ದ ವೇಳೆ ಕತ್ತಲಾಗುತ್ತಿದ್ದ ಸಮಯ. ಆಗ ಇಬ್ಬರು ಮೂವರು ಕಳ್ಳರು ರೈತನಲ್ಲಿ ಹಣವಿರಬಹುದೆಂದು ಕದಿಯಲು ಹತ್ತಿರ ಬಂದರು. ರೈತನಿಗೆ ಭಯವಾಯಿತು. ನಡುಗತೊಡಗಿದ. ಇದೆಲ್ಲವನ್ನು ನೋಡುತ್ತಿದ್ದ ಆ ಎತ್ತುಗಳು ಮುನ್ನುಗ್ಗಿದ್ದವು, ಕಳ್ಳರತ್ತ ಓಡಿಸಿಕೊಂಡು ಹೋದವು. 'ಎದ್ದೆವೋ ಬಿದ್ದೆವೋ ಸತ್ತೆವೋ' ಎಂದು ಕಳ್ಳರು ಓಡಿಹೋದರು. ರೈತನ ಕಣ್ಣಲ್ಲಿ ಧಾರಾಕಾರವಾಗಿ ನೀರು ಸುರಿಯಲಾರಂಭಿಸಿತು. ಅದನ್ನು ಕಂಡ ಎತ್ತುಗಳ ಕಣ್ಣಲ್ಲೂ ನೀರು ಬರಲಾರಂಭಿಸಿತು. ರೈತ ಅವಾಕ್ಕಾದ. ಬಾಚಿ ತಬ್ಬಿಕೊಂಡ ಎತ್ತುಗಳನ್ನು ಅವುಗಳ ಉಪಕಾರವನ್ನು ನೆನೆನೆನೆದು ಬಿಕ್ಕಳಿಸಿದ. ಮನುಷ್ಯರಲ್ಲಿ ಕಾಣಬರದ ನಡತೆಯನ್ನು ಕಂಡು ಹಿಗ್ಗಿಹೋದ.

❖



## ಶ್ರೀ ಸಿದ್ಧಲಿಂಗೇಶ್ವರ ವಚನ

**ನಾದಪ್ರಿಯಂ ನಾದಮಯಂ ನಾದೋರ್ಲಿಂಗ ನಗೇಶ್ವರಂ**
**ಆದಿ ಮಧ್ಯಾಂತರಹಿತಂ ವೇದೋ ವೇದವಿದಂ ವರಂ**
**ಮಂತ್ರ ಮೂರ್ತಿ ಮಹಾರುದ್ರಂ ಓಮಿತಿ ಜ್ಯೋತಿರೂಪಕಂ**
**ಹರ ಹರಾ ಶಿವ ಶಿವಾ ಜಯ ಜಯ ಜಯತು**
**ಶರಣ ಕರುಣಾಕರ ತ್ರಾಹಿ ಮಾಂ ಭಕ್ತವತ್ಸಲ ಮತ್ಪ್ರಾಣನಾಥ**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.**

ಶ್ರೀ ಎಡೆಯೂರು ಸಿದ್ಧಲಿಂಗೇಶ್ವರರು ಈ ವಚನದಲ್ಲಿ ತಮ್ಮ ಆರಾಧ್ಯದೇವರಾದ ಮಹಾಲಿಂಗಗುರು ಶಿವಸಿದ್ಧೇಶ್ವರ ಅಂಕಿತದಲ್ಲಿ -ದೇವರು ನಾದಪ್ರಿಯನಾಗಿದ್ದಾನೆ. ನಾದ ಮಯನೂ ಆಗಿದ್ದಾನೆ, ನಾದಲಿಂಗವೇ ಆಗಿದ್ದಾನೆ. ನಾಗ ಗಿರಿಯಾಗಿದ್ದಾನೆ. ಅವನು ಆದಿಮಧ್ಯ ಅಂತ್ಯರಹಿತನಾಗಿದ್ದಾನೆ. ವೇದವೇದಾಂಗಗಳನ್ನೆಲ್ಲ ಬಲ್ಲವನಾಗಿದ್ದಾನೆ. ಮಂತ್ರಸ್ವರೂಪಿ ಯಾಗಿದ್ದಾನೆ. ಮಹಾರುದ್ರನೆನಿಸಿದ್ದಾನೆ. ಓಂಕಾರಾದಿಗಳಿಗೆಲ್ಲ ಜ್ಯೋತಿಸ್ವರೂಪಿಯಾಗಿದ್ದಾನೆ. ಮಹಾರುದ್ರನೆನಿಸಿದ್ದಾನೆ. ಅಂತಹ ಆ ದೇವರನ್ನು ಹರಹರಾ ಶಿವಶಿವಾ ಜಯ ಜಯ ಜಯತು ಎಂದು ಶರಣನೇ, ಕರುಣಾಕರನೇ, ಭಕ್ತವತ್ಸಲನೇ, ನನ್ನ ಪ್ರಾಣದೊಡೆಯನೇ ರಕ್ಷಿಸು ಎಂದು ಪ್ರಾರ್ಥಿಸುತ್ತಿದ್ದಾರೆ.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

'ಸತ್ಯಜ್ಞಾನಾನಂದ' ನಿತ್ಯನಿರಂಜನ
ತತ್ವತದ್ರೂಪಿ ಪರಮವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಡೆದಾಡೋದೇಗುಲವೆ ನುಡಿಗೊಡುವ ದೇವರೆ
ಒಡಲಿಡಿದು ನಡೆದಿರುವ ದಿವ್ಯವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮ ನೆನೆವುದೆ ನನಗೆ ನಿತ್ಯ ಲಿಂಗಾರ್ಚನೆ
ನಿಮ್ಮ ನೆನೆವುದೆ ನನಗೆ ಕಲ್ಯಾಣ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀವೆನ್ನಲಿಂಗವು ನೀವೆನ್ನ ಶಿವಮನವು
ನೀವೆನ್ನ ಪ್ರಾಣಜ್ಯೋತಿಯು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀವೆನ್ನ ಲಿಂಗವು ನೀವೆನ್ನ ಶಿವಭಾವ
ನೀವೆನ್ನ ಅರಿವು ಅನುಭಾವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀವೆನ್ನ ಜ್ಞಾನವು ನೀವೆನ್ನ ಪ್ರೀತಿಯು
ನೀವೆನ್ನ ಮುಕುತಿ ಭಕುತಿಯು । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀವೆನ್ನ ಸಮತೆಯು ನೀವೆನ್ನ ಸ್ಯೆರಣೆ
ನೀವೆನ್ನ ಗತಿಮತಿ ಚೈತನ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀವೆನ್ನ ನೇತ್ರವು ನೀವೆನ್ನ ಶ್ರೋತ್ರವು
ನೀವೆನ್ನ ನಾಲಗೆ ನಾಸಿಕವು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀವೆನ್ನ ಪುಣ್ಯವು ನೀವೆನ್ನ ಭಾಗ್ಯವು
ನಾ ನಿಮ್ಮ ಕಾರುಣ್ಯ ಕಿರುಗೂಸು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜಗದ ಅಚ್ಚರಿಯಾದೆ ಯುಗದ ಸೋಜಿಗವಾದೆ
ಬಸವಣ್ಣ ಬಿತ್ತಿದ ಬೆಳಸಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

- ಹೆಚ್.ಎ. ವೀರಭದ್ರಯ್ಯ





## ಸರಸ್ವತಿ

-ಡಾ॥ ಸಿ.ಪಿ. ಕೃಷ್ಣಕುಮಾರ್*

ಭಾರತೀಯ ಪರಂಪರೆಯಲ್ಲಿ ಸರಸ್ವತಿಗೊಂದು ವಿಶಿಷ್ಟ ವಾದ ಸ್ಥಾನ. ಆಕೆ ವಿದ್ಯಾಧಿದೇವತೆ; ಸಮಸ್ತ ಜ್ಞಾನದ ತವರು. ವಿದ್ಯಾಕಾಂಕ್ಷಿಗಳಿಗೆ, ಜ್ಞಾನಪಿಪಾಸುಗಳಿಗೆ ಅವರು ಆರಾಧ್ಯ ದೇವಿ. ಸರಸ್ವತಿಯ ಸಾಂಪ್ರದಾಯಿಕ ಚಿತ್ರ ಅರ್ಥ ವತ್ತಾದುದು. ಅವಳ ನಾಲ್ಕೂ ಕೈಗಳಲ್ಲಿ ಎರಡು ವೀಣೆ ಯನ್ನು ಹಿಡಿದಿವೆ; ಸಂತೋಷಪ್ರದಾಯಕ ವಾದ ಲಲಿತ ಕಲೆಗಳನ್ನು ಸಂಕೇತಿಸುತ್ತದೆ, ವೀಣೆ. ಒಂದು ಕೈಯಲ್ಲಿ ಸರಸ್ವತಿ ಹಿಡಿದಿರುವ ಪುಸ್ತಕ ಜ್ಞಾನವಿಜ್ಞಾನಗಳ ಪ್ರತೀಕವಾಗಿದೆ. ವಿದ್ಯೆ ಯನ್ನು ಸಂಪಾದಿಸಿ ರೂಢಿಸಿ ಕೊಳ್ಳುವಲ್ಲಿ ಅತ್ಯಗತ್ಯವಾದ ಧ್ಯಾನ ಮನನ ಗಳಿಗೆ ಸಂಕೇತವಾಗಿದೆ, ಇನ್ನೊಂದು ಕೈಯಲ್ಲಿರುವ ಅಕ್ಷರಮಾಲೆ; ಸರಸ್ವತಿಯ ವಾಹನ ನವಿಲು, ಈ ಸಹಸ್ರಾಕ್ಷ ಪಕ್ಷಿ ಕಲ್ಪನೆಗೆ, ಪ್ರತಿಭೆಗೆ ಪ್ರತಿಮೆಯಾಗಿದೆ. ಹೀಗಾಗಿ, ಕಲೆ ಸಾಹಿತ್ಯ ಜ್ಞಾನ ವಿಜ್ಞಾನಗಳ, ಬುದ್ಧಿ ಭಾವಗಳ ಅಧಿಷ್ಠಾತ್ರಿಯಾಗಿದ್ದಾಳೆ, ಸರಸ್ವತಿ. ಅವಳ ಕೃಪೆಗೆ ಭಾರತೀಯರು ಎಂದಿನಿಂದಲೂ ಅತೀವ ಮಹತ್ವ ಕೊಡುತ್ತ ಬಂದಿದ್ದಾರೆ.



ಸರಸ್ವತಿಯನ್ನು ಕುರಿತ ಸ್ತೋತ್ರ ಪದ್ಯಗಳಲ್ಲಿ ಒಂದು ಅವಳನ್ನು 'ಕುಂದೇಂದು ತುಷಾರ ಹಾರಧವಳಾ' ಎಂದು ಕೀರ್ತಿಸುತ್ತದೆ. ಸರಸ್ವತಿಗೆ ಇಲ್ಲಿ ಆರೋಪಿತವಾಗಿರುವ ಶ್ವೇತವರ್ಣ ಎಲ್ಲ ಒಳಿತಿಗೆ, ಪಾವಿತ್ರ್ಯಕ್ಕೆ ಸೂಚಕವಾಗಿದೆ. ದಂಡಿ ಕೂಡ ಸರಸ್ವತಿಯನ್ನು 'ಸರ್ವಶುಕ್ಲಾ' ಎಂದು ಬಣ್ಣಿಸಿದ್ದಾನೆ; ಇದು ಅತ್ಯಂತ ಧ್ವನಿಪೂರ್ಣವಾಗಿದೆ. 'ಶುಕ್ಲ' ಶಬ್ದಕ್ಕೆ 'ಬಿಳುಪು' ಎಂಬುದರ ಜೊತೆಗೆ 'ವೀರ್ಯ' ಎಂಬ ಅರ್ಥವೂ ಉಂಟು. ಸರಸ್ವತಿ ಅನುಗ್ರಹಿಸುವ ವಿದ್ಯೆ ಅಥವಾ ಜ್ಞಾನ ದುರ್ಬಲವಾದುದಲ್ಲ, ವೀರ್ಯಶಾಲಿಯಾದದ್ದು. ಈ ಪ್ರಸ್ತಾವದಲ್ಲಿ 'ಜ್ಞಾನವೇ ಶಕ್ತಿ' (Knowledge is power) 'ಖಡ್ಗಕ್ಕಿಂತ ಲೇಖನಿ ಬಲವತ್ತರವಾದುದು' ಮುಂತಾದ ಮಾತುಗಳನ್ನು ಸ್ಮರಿಸಬಹುದು.

ವೈದಿಕ ಧರ್ಮ ಪ್ರಕಾರ ಸರಸ್ವತಿ ಹೆಣ್ಣು; ಬ್ರಹ್ಮನ ಮಡದಿ, ಈ ಕಲ್ಪನೆಯಲ್ಲಿ ಹುರುಳುಂಟು. ಸೃಷ್ಟಿ ಶಕ್ತಿಗೆ ಪೂರಕವಾದದ್ದು ಸರಸ್ವತೀಶಕ್ತಿ. ಜೈನಧರ್ಮ ಕೂಡ ಸರಸ್ವತಿ ಯನ್ನು ಹೆಣ್ಣೆಂದು ಕಲ್ಪಿಸಿಕೊಂಡಿದ್ದರೂ, ಅಲ್ಲಿ ಅವಳು ಬ್ರಹ್ಮ ಪತ್ನಿಯಲ್ಲ. ಪಂಪಕವಿಯ ಸರಸ್ವತೀ ಕಲ್ಪನೆ ಅಪೂರ್ವ ವಾದದ್ದು, ಈ ಸಂದರ್ಭದಲ್ಲಿ ನೆನೆಯತಕ್ಕದ್ದಾಗಿದೆ. ಅವನ ದೃಷ್ಟಿಯಲ್ಲಿ ಸರಸ್ವತಿ ಹೆಣ್ಣಲ್ಲ. ಅವನು ಘೋಷಿಸುತ್ತಾನೆ; 'ಪರಮಜಿನೇಂದ್ರವಾಣಿಯೆ ಸರಸ್ವತಿ, ಬೇರದು ಪೆಣ್ಣ ರೂಪಮಂ ಧರಿಯಿಸಿ ನಿಂದುದಲ್ತು'. ಒಂದರ್ಥದಲ್ಲಿ ಪಂಪನ ಮಾತು ದಿಟ; ಮಹಾಪುರುಷರ ವಾಣಿಯೇ ಸರಸ್ವತಿ. ಏಕೆಂದರೆ, ಅವರ ಮನದಲ್ಲಿ, ಮಾತಿನಲ್ಲಿ ಸರಸ್ವತಿ ನೆಲೆ ಗೊಂಡಿರುತ್ತಾಳೆ. ಸರಸ್ವತಿ ಒಂದು ವ್ಯತಿಯಲ್ಲ, ಶಕ್ತಿ ಎಂಬುದು ಸರಿಯೇ. ಆದರೂ ಅವಳು ಹೆಣ್ಣು, ಎಲ್ಲರ ತಾಯಿ, ಕಲೆ ಜ್ಞಾನ ವಿಜ್ಞಾನಗಳೆಲ್ಲ ಅವಳ ಸಂತಾನ ಎಂಬ ಕಲ್ಪನೆ ತಿರಸ್ಕಾರವೇನೂ ಅಗುವುದಿಲ್ಲ.

ಶಾಸನವೊಂದರಲ್ಲಿ ಕಂಡುಬರುವ ಈ ಸರಸ್ವತಿ ದರ್ಶನ ತುಂಬ ಕುತೂಹಲಕಾರಿ ಯಾದುದು;

*ನೀರಜಜಾತ ವಿಸ್ತರಿಸಿದಂಡಮುಮಂ ಮಣಿಮಾಲೆಯಾಗಿ ಬಿ*
*ಸ್ತಾರಿಸಿ ಹಸ್ತದಿಂ ಪಿಡಿದು ತನ್ನ ಸರಣ್ಬುಗುವರ್ಗೆ ಲೇಸುಮಂ*
*ಪ್ರೇರಿಸಲೋಸುಗ ಜಪಿಸುತಿರ್ಪಳಿರುಳ್ ಪಗಲಾವಳೊರ್ವಳಾ*
*ಭಾರತಿ ನಮ್ಮ ಜಿಹ್ವೆಯೊಳನಾವಿಳದಿಂದಿರುತಿರ್ಕೆ ಸಂತತಂ*

ಬ್ರಹ್ಮಾಂಡದ ತೇಜೋಗೋಲಗಳನ್ನೆಲ್ಲ ತನ್ನ ಮಣಿ ಮಾಲೆಯನ್ನಾಗಿ ಮಾಡಿಕೊಂಡು, ಲೋಕಹಿತಕ್ಕಾಗಿ ಹಗಲಿ ರುಳು ಜಪಿಸುತ್ತಿರುವ ಸರಸ್ವತಿಯ ಈ ಚಿತ್ರ ಅತ್ಯಂತ ಭವ್ಯ ವಾದದ್ದು. ಸರಸ್ವತೀ ತತ್ತ್ವ ಎಷ್ಟು ವ್ಯಾಪಕವಾದುದೆಂಬುದು ಇಲ್ಲಿ ಪ್ರತೀತವಾಗುತ್ತದೆ.

'ನಿಶ್ಶೇಷ ಜಾಡ್ಯಾಪಹಾ' ಎಂದು ಸರಸ್ವತಿಯನ್ನು ಒಂದೆಡೆ ವಿಶ್ಲೇಷಿಸಲಾಗಿದೆ. ಇಂದು ವ್ಯಕ್ತಿಯ ಮಟ್ಟದಲ್ಲಿ, ದೇಶದ ಮಟ್ಟದಲ್ಲಿ ಒಳಗೆ, ಹೊರಗೆ ಎಷ್ಟೊಂದು ಜಾಡ್ಯಗಳು ಸುತ್ತಿ ಕೊಂಡಿವೆ! ಅವುಗಳನ್ನು ಸುಟ್ಟುಹಾಕುವಂತೆ ಸರಸ್ವತಿಯನ್ನು ಪ್ರಾರ್ಥಿಸಬೇಕಾಗಿದೆ; ಆ ತಾಯ ಸಾಕ್ಷಾತ್ಕಾರಕ್ಕಾಗಿ ಹಾರೈಸ ಬೇಕಾಗಿದೆ.

*ಚತುರ್ಮುಖಮುಖಾಂಭೋಜ ವನಹಂಸವಧೂರ್ಮಮ*
*ಮಾನಸೇ ರಮತಾಂ ನಿತ್ಯಂ ಸರ್ವಶುಕ್ಲಾ ಸರಸ್ವತೀ*

❖

* ನಂ. 2265/19, 6ನೇ ಕ್ರಾಸ್, 2ನೇ ಮೈನ್, ವಿನಾಯಕನಗರ, ಮೈಸೂರು -570 012.



# ಉನ್ನತ ಸ್ಥಾನದಲ್ಲಿರುವವರ ಜವಾಬ್ದಾರಿ

–ನ್ಯಾಯಮೂರ್ತಿ ಡಾ. ಮ. ರಾಮಾ ಜೋಯಿಸ್ *

*ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ ।*
*ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ।*

ಶ್ರೇಷ್ಠ ಪುರುಷರು ಯಾವ ಯಾವ ಆಚರಣೆಗಳನ್ನು ಮಾಡುತ್ತಾರೋ, ಸಾಮಾನ್ಯ ಜನರು ಕೂಡ ಹಾಗೆಯೇ ಮಾಡುತ್ತಾರೆ. ಅವರು ಯಾವುದನ್ನು ಪ್ರಮಾಣವೆಂದು ಮಾಡಿತೋರಿಸುತ್ತಾರೋ ಸಮಸ್ತ ಮನುಷ್ಯ ಸಮುದಾಯವು ಅದಕ್ಕನುಸಾರವಾಗಿಯೇ ವರ್ತಿಸಲು ತೊಡಗುತ್ತದೆ.

(ಭಗವದ್ಗೀತೆ–೩–೨೧)

ಇದು ಭಗವದ್ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮ ಹೇಳಿರುವ ಚಿರಂತನ ಸತ್ಯ.

• ಸಮಾಜದಲ್ಲಿ ಎಲ್ಲರೂ ಸರಿಯಾದ ಮಾರ್ಗದಲ್ಲಿ ನಡೆಯಬೇಕಾದರೆ, ಅವರಿಗೆ ಉಪದೇಶಕ್ಕಿಂತ ಗುರುಹಿರಿಯರ ಮಾರ್ಗದರ್ಶನ ಬಹಳ ಮುಖ್ಯ. ಮನುಷ್ಯನ ಅದರಲ್ಲಿ ಚಿಕ್ಕವಯಸ್ಸಿನವರ ಸ್ವಭಾವವೆಂದರೆ, ಗುರುಹಿರಿಯರು ನೀಡುವ ಉಪದೇಶಕ್ಕಿಂತ ಅವರು ನಡೆದಂತೆ ನಡೆಯುವ ಪ್ರವೃತ್ತಿ ಸಹಜವಾದುದು. ಇಂದು ಸಮಾಜದಲ್ಲಿ ಆಗಿರುವ ಅಧೋಗತಿಯೆಂದರೆ, ಗುರುಹಿರಿಯರು ರಾಜಕೀಯ ನಾಯಕರು, ಮಂತ್ರಿ ಮಹಾಶಯರು ಹೇಳು ವುದು ಒಂದು ಮಾಡುವುದು ಮತ್ತೊಂದು. ಅಪಾರ ಲಂಚ ತೆಗೆದುಕೊಳ್ಳುವ ಮಂತ್ರಿಗಳೇ 'ಅಧಿಕಾರಿಗಳಿಗೆ ಲಂಚ ತೆಗೆದುಕೊಳ್ಳಬೇಡಿ. ತೆಗೆದುಕೊಂಡರೆ ಉಗ್ರ ಶಿಕ್ಷೆ ಖಚಿತ' ಎಂದು ಭಾಷಣ ಮಾಡುತ್ತಾರೆ, ಪತ್ರಿಕೆಗಳಲ್ಲಿ, ಆಕಾಶವಾಣಿ, ದೂರದರ್ಶನದಲ್ಲಿ ಪ್ರಸಾರವಾಗುತ್ತದೆ. ಉಪದೇಶ ಉಚಿತ ಆದರೆ ಅಪರಾಧ ಮಾಡುವುದು ಖಚಿತ ಆಗಿದೆ. ಅಂತಹ ಭಾಷಣಗಳು ಮತದಾರರನ್ನು ಮೋಸ ಮಾಡುವ ಸಲುವಾಗಿ ಎಂಬುದು ರಾಜಕೀಯ ನಾಯಕರಿಗೆ ಹಾಗೂ ಸಂಬಂಧಪಟ್ಟ ಅಧಿಕಾರಿಗಳಿಗೂ ಚೆನ್ನಾಗಿ ತಿಳಿದಿರುತ್ತದೆ. ಇದಕ್ಕಾಗಿಯೇ, ಬಹುಪಾಲು ಮಂತ್ರಿಗಳು ಆಪ್ತ ಕಾರ್ಯದರ್ಶಿಗಳನ್ನು, ಅಧಿಕಾರಿಗಳನ್ನು, ತಮ್ಮ ಜಾತಿಯವರನ್ನೇ ಅಥವಾ ಸಂಬಂಧಿಕರನ್ನೇ ನೇಮಕಮಾಡಿಕೊಂಡಿರುತ್ತಾರೆ. ವಿವರಗಳನ್ನು ಪಡೆದರೆ, ಇದು ಸಾಬೀತಾಗುತ್ತದೆ. ಆ ರೀತಿ ಎಚ್ಚರಿಸಿದ ಮಂತ್ರಿಗಳೇ ತಮ್ಮ ಅಧಿಕಾರಿಗಳ ಮೂಲಕವೇ ಲಂಚ ಪಡೆಯುತ್ತಾರೆ. ಅಧಿಕಾರ ದುರುಪ ಯೋಗ ಮಾಡುವವರೇ ಆ ರೀತಿ ಮಾಡಬಾರದೆಂದು ಉಪದೇಶಿಸುತ್ತಾರೆ. ಅಧಿಕಾರಿಗಳನ್ನು ವರ್ಗಮಾಡಲು, ಅಪರಾಧವೆಸಗಿದ್ದರೂ ಮೇಲ್ಬಡ್ತಿ ಕೊಡಲು ಮತ್ತು ಶಿಕ್ಷೆ ನೀಡದಿರುವುದಕ್ಕೆ ಲಂಚ ತೆಗೆದುಕೊಳ್ಳುತ್ತಾರೆ. ಇದೇ ಕೆಲಸ ಮಾಡಿಸಲು ಏಜೆಂಟರು, ಪುಢಾರಿಗಳು ನಿರ್ಮಾಣವಾಗುತ್ತಾರೆ.

ಇಂತಹ ಅನೇಕ ಉದಾಹರಣೆಗಳು ಪ್ರತಿನಿತ್ಯ ಸುದ್ದಿ ಮಾಧ್ಯಮಗಳ ಮೂಲಕ ಬೆಳಕಿಗೆ ಬರುತ್ತಿವೆ.

ಗುರುಹಿರಿಯರು, ಹಿರಿಯ ಅಧಿಕಾರಿಗಳು ಮಂತ್ರಿ ಮಹಾಶಯರು ತಮ್ಮ ಒಳ್ಳೆಯ ನಡತೆಯಿಂದ ಅದರ ಅನುಕರಣೆಯನ್ನು ಕಾಣಲು ಬಯಸಿದಲ್ಲಿ ತಾವು ತಮ್ಮ ನಡತೆಯನ್ನು ಮೊದಲು ತಿದ್ದಿಗೊಳ್ಳಬೇಕು. ಅದನ್ನು ಇತರರು ತಾವಾಗಿಯೇ ಅನುಸರಿಸುತ್ತಾರೆ.

'ನುಡಿದಂತೆ ನಡೆವವನ ಅಡಿಗೆ ವಂದನೆ' ಇದು ಬಹು ದೊಡ್ಡ ಮಾತು. ಇದೇ ಭಗವದ್ಗೀತೆಯ ಶ್ಲೋಕದ ತಾತ್ಪರ್ಯ. ಆದರೆ, ಈ ಗುಣದ ಅಭಾವವೇ ಇಂದು ಪ್ರಮುಖವಾಗಿದೆ.

ಹಾಗಾಗಿ ಸಮಾಜದ ಹಿರಿಯರಾಗಿದ್ದರೂ ಮಾರ್ಗದರ್ಶನ ಮಾಡುವ ಸ್ಥಾನದಲ್ಲಿದ್ದರೂ, ನಾನಾ ರೀತಿಯಲ್ಲಿ ವಚನ ಭ್ರಷ್ಟರಾಗಿರುವವರೂ ಅಲ್ಲದೆ ತಮ್ಮ ವಚನ ಭ್ರಷ್ಟತೆಗೆ ಹೆಮ್ಮೆ ಪಡುವವರೂ ಜಾಸ್ತಿಯಾಗಿದ್ದಾರೆ. ಎಲ್ಲಿಯವರೆಗೆ ವಚನಭ್ರಷ್ಟರೂ, ಚಾರಿತ್ರ್ಯಹೀನರೂ ಉನ್ನತಸ್ಥಾನದಲ್ಲಿರುತ್ತಾರೆ, ಸಾಮಾನ್ಯ ಜನರು ಅವರ ಅನುಕರಣೆ ಮಾಡುವುದು ಸಹಜ ಮಾನವ ಸ್ವಭಾವ.

ಮರ್ಯಾದೆಯಿಂದ ಬಾಳಬೇಕೆನ್ನುವ ಆಸೆಯಿರುವವರು ತಮ್ಮಿಂದ ತಪ್ಪು ಉದಾಹರಣೆ ನೀಡಬಾರದು ಮತ್ತು ತಮ್ಮ ಮೇಲಿನ ಸ್ಥಾನದಲ್ಲಿರುವವರಾಗಲಿ, ಹಿರಿಯರಾಗಲಿ ತಪ್ಪು ಮಾರ್ಗ ತೋರಿಸಿದರೂ, ಪ್ರಹ್ಲಾದನಂತೆ ತಿರಸ್ಕರಿಸಬೇಕು. ಬೇರೆಯವರು, ಉನ್ನತಸ್ಥಾನದಲ್ಲಿರುವವರು ಮಾಡುವ ತಪ್ಪುಗಳನ್ನು, ಅಪರಾಧವನ್ನು ತಿರಸ್ಕರಿಸಿ ಸನ್ಮಾರ್ಗದಲ್ಲಿ ನಡೆಯಬೇಕು. ತಮ್ಮ ಕೆಳಗಿನವರಿಗಾದರೂ ಸರಿಯಾದ ಮಾರ್ಗದರ್ಶನ ಮಾಡಬೇಕು. ❖

* ಮಾಜಿ ಮುಖ್ಯ ನ್ಯಾಯಾಧೀಶರು ಹಾಗೂ ಮಾಜಿ ರಾಜ್ಯಪಾಲರು, ಬೆಂಗಳೂರು.





# ಮಹಾತ್ಮಾಗಾಂಧೀಜಿಯವರ ಬದುಕಿನಾದರ್ಶಗಳು

–ಯೋಗೀಶ್ ನಿರ್ವಿಕಲ್ಪ *

ಬ್ರಿಟೀಷರ ಅಟ್ಟಹಾಸ ಮತ್ತು ಆಕ್ರಮಣ ಮುಗಿಲು ಮುಟ್ಟಿದ್ದಂತಹ ಸಂದಿಗ್ಧ ಸಮಯದಲ್ಲಿ ಭಾರತದ ದಾಸ್ಯತ್ವದ ವಿಮೋಚನೆಗಾಗಿ ಕಂಕಣ ಕಟ್ಟಿ ನಿಂತವರು ರಾಷ್ಟ್ರಪಿತ ಮಹಾತ್ಮಾಗಾಂಧೀಜಿಯವರು. ಸತ್ಯ–ಅಹಿಂಸೆ ಮತ್ತು ಸತ್ಯಾಗ್ರಹಗಳೆಂಬ ಸಾತ್ವಿಕ ಅಸ್ತ್ರಗಳ ಮೂಲಕ ಅವರು ಬ್ರಿಟೀಷರ ಅಟ್ಟಹಾಸಕ್ಕೆ ತಿಲಾಂಜಲಿ ಇಟ್ಟವರು. ಬ್ರಿಟೀಷ್ ಸಾಮ್ರಾಜ್ಯದ ಅಧಿಪತಿಗಳ ಕಲ್ಲು ಹೃದಯವನ್ನು ಸತ್ಯತತ್ತ್ವವೆಂಬ ಪವಿತ್ರ ಜಲದ ಮೂಲಕ ಪಾವನೀಕರಿಸಿದ ಕೀರ್ತಿ ಅವರದು. ಸ್ವಾತಂತ್ರ್ಯ ಸಂಗ್ರಾಮದ ಮುಖ್ಯ ಅಭಿಯಾನದಲ್ಲಿ ಪ್ರಮುಖ ಪಾತ್ರ ವಹಿಸಿದ ಅವರು ಸತ್ಯ ಮತ್ತು ಅಹಿಂಸಾ ತತ್ತ್ವಗಳನ್ನು ಜಗತ್ತಿಗೇ ಸಾಕ್ಷೀ ಕರಿಸಿದವರು. ದೇಶ ಬಾಂಧವರೆಲ್ಲರ ಭ್ರಾತೃತ್ವದ ಬದುಕಿಗಾಗಿ ತಮ್ಮ ಸಂಪೂರ್ಣ ಬದುಕನ್ನು ಮುಡುಪಿಟ್ಟ ಶ್ರೇಷ್ಠ ಸಂತರಾಗಿದ್ದ ಅವರ ಬದುಕು ತೆರೆದ ಪುಸ್ತಕದಂತೆ ಮುಕ್ತ ಹಾಗೂ ನಿಷ್ಕಲ್ಮಷಯುತವಾದುದು. ಅವರು ತಮ್ಮ ಬದುಕಿನ ಸರಿ ತಪ್ಪುಗಳೆರಡನ್ನು ಮುಕ್ತವಾಗಿ ತೆರೆದಿಟ್ಟು ಅಂತರಾತ್ಮ ನುಡಿದ ಸತ್ಯದ ಜ್ಞಾನ ಬೆಳಕಿನಲ್ಲಿ ಬದುಕಿನ ಬಂಡಿಯನ್ನು ಸಾಗಿಸಿದ ಶ್ರೇಷ್ಠಕರ್ಮಯೋಗಿಯಾಗಿದ್ದರು.



ಅವರ ಬದುಕಿನ ಪ್ರತಿಯೊಂದು ಹೆಜ್ಜೆಯೂ ಸತ್ಯ ಶೋಧನೆಯ ಹೆಜ್ಜೆಗಳಾಗಿದ್ದವು. ತತ್ತ್ವ ಅನುಸಂಧಾನದ ಪ್ರಾಯೋಗಿಕ ಬದುಕಿನ ಮೂಲಕ ಜನಸಾಮಾನ್ಯರ ಬದುಕಿಗೆ ಅತ್ಯಂತ ಹತ್ತಿರವಾಗಿದ್ದ ಅವರು ಮಹಾನ್ ಶಕ್ತಿಯಾಗಿ ರೂಪುಗೊಂಡಿದ್ದರು. ಅವರ ಬದುಕೇ ಒಂದು ಸಿದ್ಧಾಂತ ಹಾಗೂ ಸತ್ಯದ ಪ್ರತೀಕವಾದುದು. ಅವರ ತತ್ತ್ವ ಸಂದೇಶ ವಿಶ್ವಕ್ಕೆ ಸನ್ಮಾರ್ಗ ತೋರುವ ದಿಕ್ಸೂಚಿ ಯಾಗಿದೆ. ಗಾಂಧೀ ಜಯಂತಿಯ ಈ ಸಂದರ್ಭದಲ್ಲಿ ಅವರ ಬದುಕಿನಾದರ್ಶಗಳನ್ನು ನೆನೆಪಿಸಿಕೊಳ್ಳುತ್ತಾ ಅದರಲ್ಲಿ ಅಡಗಿರುವ ಅಮೂಲ್ಯ ತತ್ತ್ವ ಸಂದೇಶಗಳನ್ನು ಅರಿಯುವ ಪ್ರಯತ್ನ ಮಾಡುವುದು ಅತ್ಯಂತ ಅರ್ಥಪೂರ್ಣವಾದುದು. ಅವರು ಉಪದೇಶಿಸಿದ ತತ್ತ್ವ ಸಂದೇಶಗಳನ್ನು ನಾವು ನಮ್ಮ ಬದುಕಿನಲ್ಲಿ ಕ್ರಿಯಾತ್ಮಕವಾಗಿ ಅಳವಡಿಸಿಕೊಳ್ಳುವುದರ ಮೂಲಕ ಗಾಂಧೀ ಜಯಂತಿಯ ಆಚರಣೆಗೊಂದು ನಿಜಾರ್ಥ ತುಂಬಬಹುದು. ಸರ್ಕಾರ ಹಾಗೂ ರಾಜಕೀಯ ನಾಯಕರುಗಳು ಅವರ ತತ್ತ್ವಗಳನ್ನು ರಾಜಕೀಯ ಭಾಷಣಗಳಿಗಾಗಿ ಮಾತ್ರ ಬಳಸದೇ ಸುಂದರ ಕಲ್ಯಾಣ ರಾಷ್ಟ್ರ ನಿರ್ಮಾಣ ಕಾರ್ಯಕ್ಕಾಗಿ ಬಳಸಿಕೊಳ್ಳುವುದು ಅತ್ಯಂತ ಅನಿವಾರ್ಯ ಹಾಗೂ ಅಗತ್ಯವಾಗಿದೆ.

**ಹುಟ್ಟುಹಬ್ಬಕ್ಕೆ ವಿಶಿಷ್ಟ ಅರ್ಥ ನೀಡಿದ ಗಾಂಧೀಜಿ!**

ಒಮ್ಮೆ ಸಾಬರಮತಿ ಆಶ್ರಮದಲ್ಲಿ ಗಾಂಧೀಜಿಯವರ ಹುಟ್ಟುಹಬ್ಬವನ್ನು ಆಚರಿಸಬೇಕೆಂದು ಆಶ್ರಮವಾಸಿಗಳೆಲ್ಲರೂ ತೀರ್ಮಾನಿಸಿದ್ದರು. ಹುಟ್ಟುಹಬ್ಬದ ಆಚರಣೆಗೆ ಸಕಲ ಸಿದ್ಧತೆಗಳೂ ಸಹ ನಡೆದಿತ್ತು. ಗಾಂಧೀಜಿ ಕುಳಿತುಕೊಳ್ಳಲು ಒಂದು ಎತ್ತರವಾದ ಆಸನ ಸಿದ್ಧಪಡಿಸಿ ಅದಕ್ಕೂ ಅಲಂಕಾರ ಮಾಡಿದ್ದರು. ಹುಟ್ಟುಹಬ್ಬದ ದಿನದಂದು ಆಶ್ರಮದ ಎಲ್ಲಾ ಕೆಲಸ ಕಾರ್ಯಗಳಿಗೂ ವಿರಾಮ ಕೊಡಬೇಕೆಂಬ ಅಭಿಪ್ರಾಯ ಕೆಲವರದು. ಮತ್ತೆ ಕೆಲವರದು ವಿರಾಮ ಕೊಟ್ಟರೆ ನಮ್ಮ ಕೈ–ಕಾಲುಗಳಿಗೆ ಕೆಲಸವಿರದ ಕಾರಣ ಅಂದು ಎರಡು ನಿಮ್ಮ

* ಕುಚಲಕ್ಕಿ ಕೇರಿ, ಬಿ.ಹೆಚ್. ರಸ್ತೆ, ಶಿವಮೊಗ್ಗ–577 203.

ಬಾಳೆಹಣ್ಣು ಹಾಗೂ ಒಂದು ಲೋಟ ಹಾಲು ಮಾತ್ರ ಕೊಡಬೇಕೆಂದು ತಿಳಿಸುತ್ತಿದ್ದರು. ಮಾತುಕತೆ ನಡೆಯುತ್ತಿದ್ದಂತಹ ಸಂದರ್ಭದಲ್ಲಿ ಆ ಸ್ಥಳಕ್ಕೆ ಆಗಮಿಸಿದ ಗಾಂಧೀಜಿ ಅವರ ಭರದ ಸಿದ್ಧತೆಗಳನ್ನು ಗಮನಿಸಿ ನಸುನಗುತ್ತಾ 'ಏನು ನನ್ನ ಹುಟ್ಟುಹಬ್ಬ ಆಚರಿಸಲು ಎಷ್ಟು ಸಂತೋಷದಿಂದ ಸಿದ್ಧತೆ ನಡೆಸುತ್ತಿರುವಿರಿ. ನಿಮ್ಮೆಲ್ಲರಿಗೂ ಹುಟ್ಟು ಹಬ್ಬದ ಅರ್ಥ ಗೊತ್ತಿದೆಯೇ? ಎಂದು ಪ್ರಶ್ನಿಸಿದರು. ಪ್ರಶ್ನೆಗೆ ಉತ್ತರ ಬಾರದಿದ್ದಾಗ ಅವರು 'ಹುಟ್ಟುಹಬ್ಬದ ಆಚರಣೆಯ ಒಂದೊಂದು ವರ್ಷ ಕಳೆದಷ್ಟೂ ಅಷ್ಟಷ್ಟು ನಾವು ಸಾವಿನ ಸಮೀಪ ಸಾಗುತ್ತಿರುತ್ತೇವೆಂಬ ಅರ್ಥ ಕೊಡುತ್ತಿರುತ್ತದೆ. ಇಂದು ನೀವೆಷ್ಟು ಹುಟ್ಟು ಹಬ್ಬವನ್ನು ಆಚರಿಸಲು ನಿಮ್ಮ ಮನ ಸಂತೋಷದಿಂದೆಯೋ ಅಷ್ಟೇ ಸಂತೋಷದ ಮನಸ್ಥಿತಿ ನನ್ನ ಅಂತಿಮ ದಿನದಲ್ಲಿಯೂ ಇರಬೇಕಾಗುತ್ತದೆ' ಎಂದರು.

ಆಶ್ರಮ ವಾಸಿಗಳೆಲ್ಲರನ್ನು ಕುರಿತು ಅವರು 'ಹುಟ್ಟು ಹಬ್ಬದಂದು ನಾವು ಸಾವಿನ ಸಮೀಪ ಸಮೀಪಿಸುತ್ತಿದ್ದೇವೆಂಬ ಅನುಭವ ಉಂಟಾಗುತ್ತದೆಯೋ ಹಾಗೆಯೇ ನಾವು ಸತ್ಯದ ಕಡೆಗೂ ಸಾಗುತ್ತಿರುವ ಅನುಭವ ಉಂಟಾಗಬೇಕು. ಆ ಸತ್ಯದ ಸಾಕ್ಷಾತ್ಕಾರಕ್ಕಾಗಿ ನಾವೆಷ್ಟು ಪ್ರಯತ್ನಿಸಿದ್ದೇವೆ? ನಮ್ಮ ಬದುಕಿನ ಕರ್ತವ್ಯಗಳೇನು? ಅವುಗಳನ್ನು ನಾವೆಷ್ಟು ಮಾಡಿದ್ದೇವೆ? ಅಥವಾ ಮಾಡಲು ಎಷ್ಟು ಪ್ರಯತ್ನಿಸುತ್ತಿದ್ದೇವೆಂಬ ಅವಲೋಕನ ಮಾಡಿಕೊಳ್ಳುವುದು ಅತ್ಯಂತ ಅಗತ್ಯವಾಗಿರುತ್ತದೆ' ಎಂದು ತಿಳಿಸುವುದರ ಮೂಲಕ ಹುಟ್ಟುಹಬ್ಬದ ನಿಜವಾದ ಮಹತ್ವ ವನ್ನು ಅಂದು ಅವರು ತಿಳಿಸಿಕೊಟ್ಟಿದ್ದರು.

**ಗಾಂಧೀಜಿಯವರ ದೃಷ್ಟಿಯಲ್ಲಿ ಸತ್ಯಾಗ್ರಹ!**

ಒಮ್ಮೆ ಗಾಂಧೀಜಿಯವರ ಪತ್ನಿ ಕಸ್ತೂರಿಬಾ ರವರು ಕಾಯಿಲೆಯಿಂದ ಬಳಲಿದಾಗ ಉಪ್ಪು-ಖಾರವನ್ನು ಸಂಪೂರ್ಣ ವರ್ಜಿಸಿದ ಬರೀ ಬೇಳೆ ನೀರಿನ ಸಾರು ಮಾತ್ರ ಅವರಿಗೆ ಕೊಡಬೇಕೆಂದು ವೈದ್ಯರು ತಿಳಿಸಿದ್ದರು. ಆ ಸಮಯದಲ್ಲಿ ಗಾಂಧೀಜಿ ತಮ್ಮ ಪತ್ನಿಗೆ ಆ ಪಥ್ಯದ ವಿಷಯ ತಿಳಿಸಿದಾಗ ಕಸ್ತೂರಿಬಾ ಅವರು 'ಸ್ವಲ್ಪವೂ ಉಪ್ಪುಖಾರವಿಲ್ಲದ ಆಹಾರವನ್ನು ಹೇಗೆ ಸ್ವೀಕರಿಸುವುದು? ನೀವೇನೋ ಹೇಳುತ್ತೀರಿ ಅದಂತೂ ನನ್ನಿಂದ ಸಾಧ್ಯವಿಲ್ಲ' ಎಂದು ತಿಳಿಸಿದರು. ಆಗ ಗಾಂಧೀಜಿ 'ನಾನೂ ಸಹ ಇಂದಿನಿಂದ ನಿನ್ನ ಜೊತೆಯಲ್ಲಿಯೇ ಉಪ್ಪು ಖಾರವಿಲ್ಲದ ಆಹಾರವನ್ನು ಸ್ವೀಕರಿಸುತ್ತೇನೆ. ನಿನ್ನ ಖಾಯಿಲೆ ಗುಣಮುಖವಾಗುವವರೆಗೂ ನಾನೂ ಸಹ ಪಥ್ಯದ ಊಟ ವನ್ನು ಸ್ವೀಕರಿಸುತ್ತೇನೆ. ನಾನೂ ನಿನ್ನ ಮೇಲೆ ಯಾವುದೇ ಆಜ್ಞೆಯನ್ನೂ ಹೇರಲು ಬಯಸುವುದಿಲ್ಲ' ಎಂದು ತಿಳಿಸಿದರು. ಸತ್ಯದ ಆಗ್ರಹಕ್ಕಾಗಿ ಅವರು ಅಂದಿನಿಂದಲೇ ಪಥ್ಯದ ಊಟ ವನ್ನು ಸ್ವೀಕರಿಸಲು ಪ್ರಾರಂಭಿಸಿದರು. ಇದನ್ನರಿತ ಕಸ್ತೂರಿಬಾ ಗಾಂಧೀ 'ನನಗಾಗಿ ನೀವೂ ಪಥ್ಯದೂಟವನ್ನು ಮಾಡುವುದನ್ನು ನಾನು ಸಹಿಸುವುದಿಲ್ಲ. ನಾನು ಪಥ್ಯದ ಆಹಾರವನ್ನೇ ಸ್ವೀಕರಿಸುತ್ತೇನೆ. ನೀವೂ ಮಾತ್ರ ಪಥ್ಯದೂಟ ಮಾಡಬೇಡಿ' ಎಂದು ಗಾಂಧೀಜಿ ಬಳಿ ಬೇಡಿಕೊಳ್ಳುತ್ತಾರೆ.

ಸತ್ಯದ ಆಚರಣೆಗೆ ನಮ್ಮ ಆಗ್ರಹ ಈ ರೀತಿಯಲ್ಲಿರಬೇಕೆಂಬುದು ಗಾಂಧೀಜಿಯವರ ಅಭಿಪ್ರಾಯವಾಗಿತ್ತು.

**ದುಂದುವೆಚ್ಚಕ್ಕೆ ಕಡಿವಾಣ ಹಾಕಿದ ಗಾಂಧೀಜಿ !**

ಸ್ವಾತಂತ್ರ್ಯ ಪೂರ್ವದಲ್ಲಿ ಜನಜಾಗೃತಿಗಾಗಿ ಗಾಂಧೀಜಿ ದೇಶದ್ಯಾಂತ ಪ್ರವಾಸ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಂಚರಿಸುತ್ತಿದ್ದರು. ಆ ಸಂದರ್ಭದಲ್ಲಿ ನಿಧಿ ಸಂಗ್ರಹವೂ ಸಹ ನಡೆಯುತ್ತಿತ್ತು. ಜನತೆಯ ಪರಿಶ್ರಮದ ಪ್ರತೀಕವಾದ ಪವಿತ್ರ ನಿಧಿಯನ್ನು ಯಾವುದೇ ಕಾರಣದಿಂದಲೂ ದುಂದು ವೆಚ್ಚವಾಗಬಾರದೆಂಬುವುದು ಗಾಂಧೀಜಿಯವರ ಆಜ್ಞೆಯಾಗಿತ್ತು.

ಪ್ರತಿದಿನ ಅವರು ಊಟದ ಸಮಯದಲ್ಲಿ ಜೇನುತುಪ್ಪ ತೆಗೆದುಕೊಳ್ಳುವ ರೂಢಿ ಬಹು ಹಿಂದಿನಿಂದಲೂ ನಡೆದುಕೊಂಡು ಬಂದ ಒಂದು ರೂಢಿಯಾಗಿತ್ತು. ಒಮ್ಮೆ ಒಂದು ಊರಿನಿಂದ ಮತ್ತೊಂದು ಊರಿಗೆ ಪ್ರಯಾಣಿಸುವಾಗ ಜೇನುತುಪ್ಪದ ಬಾಟಲಿಯನ್ನು ಹಿಂದಿನ ಊರಿನಲ್ಲಿಯೇ ಮರೆತುಬಿಟ್ಟು ಬಂದಿದ್ದ ಕಾರಣ ಹೊಸ ಜೇನುತುಪ್ಪ ಬಾಟಲಿಯನ್ನು ಕಾರ್ಯಕರ್ತರು ಖರೀದಿಸಿದ್ದರು. ಊಟ ಸ್ವೀಕರಿಸುವ ಸಮಯದಲ್ಲಿ ಹೊಸ ಜೇನುತುಪ್ಪದ ಬಾಟಲಿಯನ್ನು ಗಮನಿಸಿದ ಗಾಂಧೀಜಿ 'ಏತಕ್ಕಾಗಿ ಹೊಸ ಜೇನು ತುಪ್ಪದ ಬಾಟಲಿಯನ್ನು ಖರೀದಿಸಿರುವಿರಿ' ಎಂದು ಪ್ರಶ್ನಿಸಿದರು. ಕಾರ್ಯಕರ್ತರು ಮರೆತುಬಂದ ಮುಖ್ಯ ಕಾರಣವನ್ನು ತಿಳಿಸಿದರು. ಆಗ ಅವರು 'ಮರೆತು ಬಂದದ್ದು





ತಪ್ಪು. ಆ ಕಾರಣಕ್ಕಾಗಿ ಸಾರ್ವಜನಿಕರ ಶ್ರಮದ ಹಣವನ್ನು ಈ ರೀತಿಯಲ್ಲಿ ದುಂದುವೆಚ್ಚ ಮಾಡು ವುದೇ? ನಾನೇನೂ ಜೇನುತುಪ್ಪ ಇಲ್ಲದಿದ್ದರೇ ಸಾಯುತ್ತಿದ್ದೇನೆ? ಆ ಹಿಂದಿನ ಜೇನುತುಪ್ಪದ ಬಾಟಲಿ ಉಪಯೋಗಕ್ಕೆ ಬರುವಷ್ಟು ದಿನ ಈ ಹೊಸ ಜೇನು ತುಪ್ಪದ ಬಾಟಲಿ ಅವಶ್ಯಕತೆಯಿಲ್ಲ' ಎಂದು ತಿಳಿಸಿದರು. ಸಾರ್ವಜನಿಕ ಹಣ ವನ್ನು ಯಾವ ರೀತಿಯಲ್ಲಿ ಯುಕ್ತವಾಗಿ ಬಳಸಬೇಕೆಂಬ ಸತ್ಯದರಿವನ್ನು ಅಂದು ಎಲಾ ಸಹವರ್ತಿಗಳಿಗೆ ಅರಿವು ಮಾಡಿಕೊಟ್ಟಿದರು.

**ಕಳ್ಳತನ ಪ್ರಕರಣ ಕುರಿತ ಗಾಂಧೀಜಿಯ ಅವಲೋಕನ!**

ಒಮ್ಮೆ ಗಾಂಧೀಜಿಯವರ ಸಾಬರಮತಿ ಆಶ್ರಮದಲ್ಲಿ ಕಳ್ಳತನದ ಒಂದು ಪ್ರಕರಣ ನಡೆದಿತ್ತು. ಆಶ್ರಮ ವಾಸಿಗಳೆಲ್ಲರೂ ಈ ಕಳ್ಳತನದ ಕುರಿತು ಗಾಂಧೀಜಿಯವರ ಗಮನಕ್ಕೆ ತಂದಿದ್ದರು. ಅವರಲ್ಲಿ ಕೆಲವರು ಪೋಲೀಸ್ ಠಾಣೆಗೆ ದೂರು ನೀಡಲು ಮುಂದಾಗಿದ್ದರು. ಆ ಸಂದರ್ಭದಲ್ಲಿ ವಿಷಯ ಅರಿತ ಗಾಂಧೀಜಿ ತಕ್ಷಣ ಪ್ರತಿಕ್ರಿಯಿಸುತ್ತಾ 'ನಮ್ಮ ಆಶ್ರಮದಲ್ಲಿ ಕಳ್ಳತನವಾಗಿದೆ ಎಂದರೆ ನನ್ನ ಆಶ್ರಮದಲ್ಲಿ ಬೆಲೆಬಾಳುವ ವಸ್ತುಗಳಿರಬೇಕು. ನಮ್ಮ ಆಶ್ರಮದ ಸುತ್ತಮುತ್ತ ಕಳ್ಳರಿರಬೇಕು. ಆ ಕಳ್ಳರನ್ನು ಗುರುತಿಸಿ ಅವರಲ್ಲಿನ ಕಳ್ಳತನದ ಮನೋಭಾವನೆಯನ್ನು ಹೋಗಲಾಡಿಸಿ ಅವರಲ್ಲಿ ಸದ್ಭಾವನೆ-ಸತ್ಕ್ರಿಯೆಗಳನ್ನು ಮೂಡಿಸಲು ನಾನು ವಿಫಲನಾಗಿದ್ದೇನೆ ಎಂದರ್ಥ' ಎಂದು ನೊಂದು ತಿಳಿಸಿದರು.

ಕಳ್ಳತನದ ಪ್ರಕರಣವೊಂದನ್ನು ಗಾಂಧೀಜಿ ದೃಷ್ಟಿಸಿದ ಅವರ ಮನೋಸ್ಥಿತಿಯಲ್ಲಿ ಒಬ್ಬ ಶ್ರೇಷ್ಠ ಸಂತನ ಅಂತಃಸತ್ವವನ್ನು ಕಾಣಬಹುದಿತ್ತು. ಕಳ್ಳತನದ ಪ್ರಕರಣವನ್ನು ಅವರು ತಮ್ಮ ಆತ್ಮಾವಲೋಕನಕ್ಕೆ ಒಳಪಡಿಸಿಕೊಂಡು ಅವಲೋಕಿಸಿದ್ದು ಒಬ್ಬ ಶ್ರೇಷ್ಠ ಸಮಾಜ ಸುಧಾರಕನ ಮನೋಸ್ಥಿತಿಗೆ ಸಾಕ್ಷಿಯಾಗಿದೆ.

**ಗಾಂಧೀಜಿಯವರಲ್ಲಿದ್ದ ಅಪಾರ ಶಾಂತಿ ಮತ್ತು ಸೈರಣೆ!**

ಸ್ವಾತಂತ್ರ್ಯ ಪೂರ್ವದಲ್ಲಿ ಒಮ್ಮೆ ಕಲ್ಕತ್ತಾ ಮಹಾನಗರದಲ್ಲಿ ಒಂದು ಬೃಹತ್ ಕಾಂಗ್ರೆಸ್ ಅಧಿವೇಶನ ಏರ್ಪಾಡಾಗಿತ್ತು. ಅಲ್ಲಿ ಗಾಂಧೀಜಿಯವರ ಅಧ್ಯಕ್ಷತೆಯ ಭಾಷಣವಿತ್ತು. ಇನ್ನೇನು ಗಾಂಧೀಜಿಯವರು ಭಾಷಣ ಪ್ರಾರಂಭಿಸಬೇಕೆನ್ನುವಷ್ಟರಲ್ಲಿ ವೇದಿಕೆಯ ಮುಂದೆ ಒಬ್ಬ ಯುವಕ ಕೋಪದಿಂದ ಏನೋ ಹೇಳುವ ಪ್ರಯತ್ನ ಮಾಡುತ್ತಿದ್ದನು. ಆಗ ಕಾರ್ಯಕರ್ತರು ಅವನನ್ನು ಸುತ್ತುವರೆದು ಹೊರಹಾಕಲು ಪ್ರಯತ್ನಿಸುತ್ತಿದ್ದರು. ಆ ಸಂದರ್ಭದಲ್ಲಿ ಗಾಂಧೀಜಿ ಕಾರ್ಯಕರ್ತರಿಗೆ ಸೂಚನೆ ನೀಡುತ್ತಾ 'ದಯವಿಟ್ಟು ಆತನಿಗೆ ಯಾವ ತೊಂದರೆ ಕೊಡಬೇಡಿ, ಆತ ಹೇಳಬೇಕಿರುವ ಅಭಿಪ್ರಾಯಕ್ಕೆ ಅವಕಾಶ ನೀಡಿ' ಎಂದು ಸೂಚನೆ ನೀಡಿದರು. ಆ ಸಂದರ್ಭದಲ್ಲಿ ಆ ಯುವಕ ಕೋಪದಿಂದ 'ಗಾಂಧೀಜಿ ನೀವೊಬ್ಬ ಹೇಡಿ, ನಿಮ್ಮ ಮುಂದಾಳತ್ವದ ಸಹಾಯದಿಂದ ಭಾರತ ಸ್ವಾತಂತ್ರ್ಯ ಪಡೆಯುವುದು ಅಸಾಧ್ಯ. ನಿಮ್ಮ ಅಹಿಂಸಾ ತತ್ತ್ವ ನಮಗೆ ಬೇಡ' ಎಂದು ಕಿಡಿಕಾರುತ್ತಾನೆ. ಅತನ ಪ್ರತಿಯೊಂದು ನುಡಿಯನ್ನು ತದೇಕಚಿತ್ತದಿಂದ ಆಲಿಸಿದ ಗಾಂಧೀಜಿ ಆತನ ಕಡೆಗೆ ಮಂದಹಾಸದ ಮುಗುಳ್ನಕ್ಕು ಒಂದಿಷ್ಟು ವಿಚಲಿತಗೊಳ್ಳದೆ ತಾವು ಮಾಡಬೇಕಾದ ಭಾಷಣದ ಕಡೆಗೆ ಗಮನ ಹರಿಸಿದ್ದರು. ಒಂದು ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ತನ್ಮಯಗೊಂಡ ಒಬ್ಬ ರಾಷ್ಟ್ರ ನಾಯಕನಲ್ಲಿರಬೇಕಾದ ಶಾಂತಿ ಮತ್ತು ಸೈರಣೆಗೆ ಅಂದು ಗಾಂಧೀಜಿ ಸಾಕ್ಷಿಯಾಗಿದ್ದರು.

**ಶತ್ರುವಿನಲ್ಲಿಯೂ ಮಿತ್ರತ್ವ ಕಂಡಿದ್ದ ಗಾಂಧೀಜಿ!**

ಒಮ್ಮೆ ದಕ್ಷಿಣ ಆಫ್ರಿಕಾದ ಜೋಹಾನ್ಸ್‌ಬರ್ಗ್‌ನ ಮೆಸಾನಿಕ್ ಸಭಾಂಗಣದಲ್ಲಿ ಒಂದು ಮಹತ್ತರ ಸಭೆ ಏರ್ಪಡಿಸಲಾಗಿತ್ತು. ಆ ಸಭೆಯ ಮುಖ್ಯ ಭಾಷಣಕಾರರನ್ನಾಗಿ ಗಾಂಧೀಜಿಯವರನ್ನು ಆಹ್ವಾನಿಸಲಾಗಿತ್ತು. ಸಭಾಂಗಣದಲ್ಲಿ ನೆರೆದಿದ್ದ ಜನಸಮೂಹವನ್ನು ಉದ್ದೇಶಿಸಿ ಗಾಂಧೀಜಿ ಅತ್ಯಂತ ಪ್ರಭಾವಯುತ ಭಾಷಣ ಮಡಿ ಮುಗಿಸಿ ವೇದಿಕೆಯಿಂದ ಕೆಳಗೆ ಇಳಿಯುತ್ತಿದ್ದಂತಹ ಸಂದರ್ಭದಲ್ಲಿ ಅತ್ತ ಮರೆಯಲ್ಲಿ ನಿಂತಿದ್ದ ಒಬ್ಬ ವ್ಯಕ್ತಿಯನ್ನು ಗಮನಿಸಿದರು. ತದನಂತರ ಆತನ ಕೈಗೆ ಕೈಗಳನ್ನು ಜೋಡಿಸಿ ಸ್ವಲ್ಪದೂರಕ್ಕೆ ಹೋಗಿ ಸಮಾಲೋಚಿಸುತ್ತಿದ್ದರು. ಅವರ ಈ ಸಮಾಲೋಚನೆಯನ್ನು ದೂರದಿಂದ ಕಾರ್ಯಕರ್ತರು ಗಮನಿಸುತ್ತಿದ್ದರು. ಆತನನ್ನು ಕಳುಹಿಸಿಕೊಟ್ಟು ಬಂದ ನಂತರ 'ಆತ ಯಾರು? ನೀವೇಕೆ ಅಷ್ಟು ದೂರದಲ್ಲಿ ನಿಂತು ಮಾತನಾಡುತ್ತಿದ್ದೀರಿ?' ಎಂದು ಕಾರ್ಯಕರ್ತರು

ಕೇಳಿದರು. ಅವರಿಗೆ ಪ್ರತಿಕ್ರಿಯಿಸುತ್ತಾ ಗಾಂಧೀಜಿ 'ಅತ ನನ್ನನ್ನು ಕೊಲ್ಲಲು ಹೊಂಚು ಹಾಕಿದ್ದನಂತೆ! ನಾನು ನಿಮ್ಮಗಳ ಮತ್ತು ಸರ್ಕಾರದ ಜೊತೆ ಸೇರಿಕೊಂಡು ನನ್ನ ಸ್ವಾರ್ಥ ಸಾಧಿಸುತ್ತಿದ್ದೇನೆಂಬ ನಂಬಿಕೆ ಆತನಲ್ಲಿ ಬೇರೂರಿದ ಕಾರಣ ಆತ ನನ್ನನ್ನು ಕೊಲ್ಲುವ ತೀರ್ಮಾನ ಕೈಗೊಂಡಿದ್ದನಂತೆ. ಈ ಕುರಿತು ನನ್ನ ಮತ್ತು ಆತನ ನಡುವೆ ಸಮಾಲೋಚನೆ ನಡೆಯುತ್ತಿತ್ತು. ನಾನು ಆತನಲ್ಲಿದ್ದ ತಪ್ಪು ತಿಳುವಳಿಕೆಯನ್ನು ಅರಿವು ಮಾಡಿಕೊಟ್ಟೆ ಇಷ್ಟಾದರೂ ನಿನ್ನ ನಂಬಿಕೆ ದೃಢವಾಗಿದ್ದರೆ ನನ್ನನ್ನು ಕೊಲ್ಲು ಎಂದು ಆತನಲ್ಲಿ ವಿನಂತಿಸಿದೆ. ಆಗ ಆತನಿಗೆ ಆತನ ತಪ್ಪಿನ ಅರಿವುಂಟಾಗಿ ನನ್ನಲ್ಲಿ ಕ್ಷಮೆಯಾಚಿಸಿ ಹೊರಟು ಹೋದ' ಎಂದು ತಿಳಿಸಿದರು.

ನಡೆದ ಘಟನೆಯನ್ನು ತಿಳಿದು ಹೌಹಾರಿದ ಕಾರ್ಯಕರ್ತರು 'ಕೊಲ್ಲಲು ಬಂದವನೊಡನೆ ಸಮಾಲೋಚನೆಯೇ? ಆತನನ್ನು ಬಂಧಿಸಿ ಪೋಲೀಸರ ವಶಕ್ಕೆ ಕೊಡಬೇಕಾಗಿತ್ತು' ಎಂದು ಸಿಡಿಮಿಡಿಗೊಂಡರು. ಗಾಂಧೀಜಿ ಅವರನ್ನು ಸಮಾಧಾನಪಡಿಸುತ್ತಾ 'ನಿಮ್ಮ ವಿಚಾರ ತಪ್ಪು ನೋಡಿ, ನೀವು ಹೇಳಿದಂತೆ ನಾನು ಆತನನ್ನು ಪೋಲೀಸರಿಗೆ ಒಪ್ಪಿಸಿದ್ದರೆ ಆತ ನಿಜಕ್ಕೂ ನನ್ನ ಶತ್ರುವಾಗುತ್ತಿದ್ದ ಈಗ ನೋಡಿ, ಆತ ನನ್ನ ಒಬ್ಬ ಆತ್ಮೀಯ ಸ್ನೇಹಿತನಾಗಿದ್ದಾನೆ. ನಿಜಕ್ಕೂ ಆತನ ದೃಷ್ಟಿಯಲ್ಲಿ ನಾನು ಸ್ವಾರ್ಥಿ ಯಾಗಿದ್ದರೆ ಆತನಿಂದ ಕೊಲ್ಲಲ್ಪಡುವುದು ಅತ್ಯಂತ ಉತ್ತಮವಾಗುತ್ತಿತ್ತು' ಎಂದು ತಿಳಿಸಿದರು.

ನಾವು ನಮ್ಮ ಪ್ರತಿಯೊಬ್ಬ ಶತ್ರುವಿನಲ್ಲೂ ಮಿತ್ರತ್ವ ಕಾಣಬೇಕೇ ವಿನಃ ದ್ವೇಷ ಕಾಣಬಾರದೆಂಬ ವಿಶಾಲ ಮನೋಭಾವದ ತತ್ತ್ವಸಾರವನ್ನು ಅಂದು ಗಾಂಧೀಜಿ ತನ್ನೆಲ್ಲಾ ಕಾರ್ಯಕರ್ತರಿಗೆ ಅರಿವು ಮಾಡಿಕೊಟ್ಟಿದ್ದರು.

❖

ಪ್ರತಿಯೊಬ್ಬನೂ ತನಗೆಷ್ಟು ಬೇಕೋ ಅಷ್ಟನ್ನೇ ತೆಗೆದುಕೊಳ್ಳುತ್ತಿದ್ದರೆ ಮತ್ತು ಅದಕ್ಕಿಂತ ಹೆಚ್ಚಾದುದನ್ನು ಬಿಟ್ಟುಬಿಡುತ್ತಿದ್ದರೆ ಆಗ ಈ ಪ್ರಪಂಚದಲ್ಲಿ ಬಿಕಾರಿಗಳಿರುತ್ತಿರಲಿಲ್ಲ ಎಂದೂ ಯಾರೂ ಹೊಟ್ಟೆಗಿಲ್ಲದೆ ಸಾಯುತ್ತಿರಲಿಲ್ಲ.

-ಮಹಾತ್ಮಾ ಗಾಂಧೀಜಿ

### ಗಾಂಧೀಜಿ ನುಡಿಮುತ್ತುಗಳು

ಸರ್ವವ್ಯಾಪಿಯೂ ಅವರ್ಣನೀಯವೂ ಆದ ಶಕ್ತಿಯೊಂದಿದೆ. ನಾನದನ್ನು ನೋಡದಿದ್ದರೂ, ಅದರ ಸ್ಪರ್ಶ ನನಗಿದೆ. ತರ್ಕ ರುಜುವಾತುಗಳನ್ನು ಧಿಕ್ಕರಿಸಿ ನಿಂತು, ದೃಶ್ಯವಾಗಿದ್ದರೂ ಅನುಭವಕ್ಕೆ ಬರುವ ಈ ಶಕ್ತಿ ನನ್ನ ಇಂದ್ರಿಯ ಗೋಚರವಾದ ಎಲ್ಲಕ್ಕಿಂತಲೂ ಬೇರೆಯಾಗಿದೆ. ಇದು ಇಂದ್ರಿಯಾತೀತವಾದದ್ದು. ಸ್ವಲ್ಪ ಮಟ್ಟಿಗೆ ಆ ಭಗವಂತನ ಅಸ್ತಿತ್ವವನ್ನು ಸಿದ್ಧಾಂತ? ಮಾಡುವುದು ಸಾಧ್ಯವೆಂದು ತೋರುತ್ತದೆ.

ನನ್ನ ಸುತ್ತಲೂ ಇರುವೆಲ್ಲವೂ ಸದಾ ವ್ಯತ್ಯಸ್ತವಾಗುತ್ತ ನಾಶವಾಗುತ್ತ ಬರುತ್ತಿದ್ದರೂ, ಆ ಬದಲಾವಣೆಯ ಅಂತರಾಳದಲ್ಲಿ ಎಲ್ಲವನ್ನೂ ಹಿಡಿದಿಟ್ಟಿರುವ ಒಂದು ಜೀವಶಕ್ತಿ ಇದೆ, ಸೃಷ್ಟಿ ನಾಶ ಪುನಃ ಸೃಷ್ಟಿ-ಇವೆಲ್ಲ ಅದರ ಕೆಲಸ. ಆ ವಿಧಾಯಕ ಶಕ್ತಿ ಅಥವಾ ಚೈತನ್ಯವೇ ದೇವರು. ಇಂದ್ರಿಯಗಳ ಮೂಲಕ ನನಗೆ ಗೋಚರವಾಗುವ ಯಾವುದೂ ಉಳಿಯುವುದು ಸಾಧ್ಯವಿಲ್ಲ ಮತ್ತು ಉಳಿಯುವುದಿಲ್ಲವಾದ್ದರಿಂದ 'ಅವನು' ಮಾತ್ರ 'ಇದ್ದಾನೆ'.

ಈ ಶಕ್ತಿ ದಯಾಮಯವೂ ಕೆಡುಕಾದುದೋ? ಅದು ದಯಾಮಯವೆಂದೇ ನನಗೆ ಕಾಣುತ್ತದೆ. ಏಕೆಂದರೆ ಸಾವಿನ ನಡುವೆ ಬದುಕು ಊರ್ಜಿತವಾಗಿರುವುದನ್ನೂ, ಅಸತ್ಯದ ನಡುವೆ ಸತ್ಯ ನೆಲೆಯಾಗಿರುವುದನ್ನೂ, ಅಂಧಕಾರದಲ್ಲಿ ಜ್ಯೋತಿ ಬೆಳಗುತ್ತಿರುವುದನ್ನೂ ನಾನು ಕಾಣಬಲ್ಲೆ. ಆದ್ದರಿಂದ ದೇವರು ಜೀವನವೂ ಸತ್ಯವೂ ಜ್ಯೋತಿಯೂ, ಆಗಿರುವನೆಂದು ನಾನು ಗ್ರಹಿಸುತ್ತೇನೆ. ಅವನ ಪ್ರೇಮ, ಪರಮಮಂಗಳ.

ಯಾವ ತರ್ಕಸಮ್ಮತವಾದ ವಿಧಾನದಿಂದಲೂ ಆಗಲಿ ಪಾಪದ ಅಸ್ತಿತ್ವಕ್ಕೆ ನಾನು ವಿವರಣೆ ಕೊಡಲಾರೆ. ಹಾಗೆ ಮಾಡಲಪೇಕ್ಷಿಸುವುದು ಭಗವಂತನೊಡನೆ ಸಮಾನನಂತೆ ನಿಂತಂತಾಗುತ್ತದೆ. ಪಾಪವನ್ನು ಪಾಪವೆಂದೇ ತಿಳಿಯುವಷ್ಟು ವಿನಯ ನನ್ನಲ್ಲಿದೆ; ನಾನು ದೇವರನ್ನು ದೀರ್ಘಯಾತನೆಯೆಂದೂ, ಸಹನೆಯೆಂದೂ ಕರೆಯುತ್ತೇನೆ. ಅವನು ಹಾಗಿರುವುದರಿಂದಲೇ ಲೋಕದಲ್ಲಿ ಪಾಪಕ್ಕೆ ಅವಕಾಶ ಕೊಟ್ಟಿದ್ದಾನೆ.





# 'ವಿಶ್ವಕ್ಕೆ ಮಾದರಿಯಾದ ವ್ಯಕ್ತಿತ್ವ ಸರ್.ಎಂ. ವಿಶ್ವೇಶ್ವರಯ್ಯ

* -ಯು.ಎನ್. ಸಂಗನಾಳಮಠ

'ನೀವೀಗ ಹುದ್ದೆಗಳಿಂದ ಲಭಿಸುವ ಆರ್ಥಿಕ ಅನುಕೂಲತೆಗಳಿಗಿಂತ ಸಾರ್ವಜನಿಕ ಸೇವೆಗೆ ಸೂಕ್ತ ಅವಕಾಶಗಳನ್ನು ಅರಸುವ ಮನಸ್ಥಿತಿಯಲ್ಲಿರುವಿರಿ ಮತ್ತು ಅದರಿಂದ ತೃಪ್ತಿಯನ್ನು ಹೊಂದಲು ಬಯಸುತ್ತಿದ್ದೀರಿ ಎಂಬುದು ನಮ್ಮ ಗಮನಕ್ಕೆ ಬಂದಿದೆ. ನಿಮ್ಮ ತಾಯ್ನೆಲದ ಸೇವೆಗೆ ಇದೊಂದು ಅಪೂರ್ವ ಅವಕಾಶ. ನಮ್ಮಲ್ಲಿಗೆ ಬನ್ನಿರಿ ಒಡಗೂಡಿ ಒಂದು ಮಾದರಿ ನಾಡು ಕಟ್ಟೋಣ' ಇದು ೨೮ರ ತರುಣ ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಎಂ. ವಿಶ್ವೇಶ್ವರಯ್ಯನವರಿಗೆ ರಾಜ್ಯದ ಮುಖ್ಯ ಎಂಜಿನಿಯರ್ ಹುದ್ದೆ ಒಪ್ಪಿಕೊಳ್ಳಲು ಆಹ್ವಾನಿಸಿದ ಪತ್ರ. ಅದು ೨೪ ಸೆಪ್ಟೆಂಬರ್ ೧೯೦೯. ಆದರೆ ಎಂ.ವಿ. ಅವರು ತಕ್ಷಣ ಒಪ್ಪದೇ ಆಹ್ವಾನಕ್ಕೆ ಹಿಗ್ಗಲಿಲ್ಲ, ಕುಗ್ಗಲಿಲ್ಲ. ಎಂ.ವಿ. ಅವರ ನಿಷ್ಠುರತೆ, ಸ್ವಾಭಿಮಾನದ ಪ್ರಶ್ನೆ.

ನೂರಾ ಎರಡು ವರ್ಷಗಳ ತುಂಬು ಜೀವನವನ್ನು ಕರ್ಮಯೋಗಿಯಂತೆ ಬಾಳಿದವರು ಭಾರತರತ್ನ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು. ಅವರದು ನಿಸ್ವಾರ್ಥ ಸೇವೆ ಸಾರ್ಥಕ ಬದುಕು. ಮುದ್ದೇನಹಳ್ಳಿ ಎಂಬ ಕುಗ್ರಾಮ ದಲ್ಲಿ ಹುಟ್ಟಿ ೧೫ನೆಯ ವಯದಲ್ಲಿ ತಂದೆಯನ್ನು ಕಳೆದುಕೊಂಡು, ದಾರಿದ್ರ್ಯದ ಜೀವನ ಸಾಗಿಸಿ, ಬೀದಿ ದೀಪದ ಬೆಳಕಿನಲ್ಲಿ ಓದಿ ತನ್ನ ಪ್ರತಿಭೆ ಪರಿಶ್ರಮ ಗಳಿಂದ ಉನ್ನತ ಹುದ್ದೆ ಹೊಂದಿ ಇಡೀ ನಾಡಿನ ಜನತೆಗೆ ಜೀವನಾ ಧಾರವಾದ ಮಹತ್ಕಾರ್ಯಗಳನ್ನು ಮಾಡಿ, ಕಾರ್ಯದಕ್ಷತೆ, ಪ್ರಾಮಾಣಿಕತೆ, ಸಮಯಪರಿಪಾಲನೆ, ಜನಸೇವಾನಿಷ್ಠೆಗೆ ಹೆಸರಾದವರು. ೧೮೮೦ರಲ್ಲಿ ಡಿಸ್ಟಿಂಕ್ಷನ್ ನಲ್ಲಿ ಬಿ.ಎ. ಪಾಸು ಮಾಡಿ, ಪುಣೆಯಲ್ಲಿ ಇಂಜಿನಿಯರಿಂಗ್ ಕೋರ್ಸ್ ಅನ್ನು(೩ವರ್ಷದ) ಎರಡೂವರೆ ವರ್ಷಕ್ಕೆ ಮುಗಿಸಿದವರು. ಜೇಮ್ಸ್ ಬರ್ಕಲಿ ಬಹುಮಾನ ದೊರೆತುದಲ್ಲದೆ ಮುಂಬೈ ಪಿಡಬ್ಲ್ಯುಡಿ ವಿಭಾಗದಲ್ಲಿ ಸಹಾಯಕ ಇಂಜಿನಿಯರ್ ಆಗಿ ನೌಕರಿ ದೊರೆಯಿತು. ಆಗ ಸಿಂಧು ಪ್ರಾಂತ್ಯವು ಮುಂಬೈ ಆಡಳಿತಕ್ಕೆ ಒಳಪಟ್ಟಿತ್ತು. ಹಾಗಾಗಿ ಜಲವಿತರಣೆ ಕಾಮಗಾರಿಯೊಂದನ್ನು ಕೈಗೆತ್ತಿಕೊಂಡ ವಿಶ್ವೇಶ್ವರಯ್ಯನವರು ಸಿಂಧೂ ನದಿಯಿಂದ ಸುಕ್ಕೂರಿಗೆ ನೀರು ಹರಿಸುವ ಮೂಲಕ ತಮ್ಮ ಜಾಣ್ಮೆಯ ಪರಿಚಯ ಮಾಡಿಕೊಟ್ಟರು. ನಂತರ ಗುಜರಾತ್‌ನ ಸೂರತ್‌ಗೆ ವರ್ಗ ವಾದರು. ಅಲ್ಲಿನ ನೀರು ಸರಬರಾಜು ಹಾಗೂ ಒಳ ಚರಂಡಿ ಸಮಸ್ಯೆಯನ್ನು ಯಶಸ್ವಿ ಯಾಗಿ ಪರಿಹರಿಸಿದರು. ೨೦೦೧ ರಲ್ಲಿ ತೀವ್ರ ಭೂಕಂಪಕ್ಕೆ ಗುರಿಯಾದ ಗುಜರಾತ್‌ನ ಕಛ್, ಭುಜ್. ಜಿಲ್ಲೆಗಳು ಹೆಚ್ಚೂ ಕಡಿಮೆ ನಾಮಾವಶೇಷ ವಾದರೂ ನೀರು ಸರಬರಾಜು ವ್ಯವಸ್ಥೆ ಹಾನಿ ಯಾಗಿರಲಿಲ್ಲ. ನಂತರ ಪೂನಾಕ್ಕೆ ವರ್ಗ ಮಾಡಲಾಯಿತು. ಅಲ್ಲಿ ನೀರನ್ನು ಪೋಲು ಮಾಡದೆ ಬಳಸುವ ವ್ಯವಸಾಯ ಕ್ರಮವನ್ನು ಸಿದ್ಧಪಡಿಸಿದರು. ಅದೇ ಬ್ಲಾಕ್ ಸಿಸ್ಟಮ್ ೧೯೦೩ರಲ್ಲಿ ಪೂನಾ ಬಳಿಯ ಖಡಕ್‌ವಾಸ್ಲಾ ಜಲಾಶಯಕ್ಕೆ ಸ್ವಯಂ ಚಾಲಿತ ಗೇಟ್‌ಗಳನ್ನು ಅಳವಡಿಸಿದ ವಿಶ್ವೇಶ್ವರಯ್ಯನವರ ಸಾಧನೆಯಿಂದ ವಿಶ್ವದ ಏಕೈಕ ವ್ಯಕ್ತಿ ಎನಿಸಿದರು.

೧೯೦೬ರಲ್ಲಿ ಬ್ರಿಟಿಷ್ ಆಡಳಿತದಲ್ಲಿದ್ದ ಯೆಮನ್ ದೇಶದ ಏಡನ್ ನಗರದ ಕುಡಿಯುವ ನೀರಿನ ಸಮಸ್ಯೆ ನಿವಾರಿಸಲು ವಿಶ್ವೇಶ್ವರಯ್ಯನವರನ್ನು ನಿಯೋಜಿಸಲಾಯಿತು. ಬೆಟ್ಟಗಳಿಂದ ಸುತ್ತುವರೆದ ಏಡನ್‌ನಲ್ಲಿ ಸುರಿದ ಮಳೆ ಮರಳು ಭೂಮಿಯಲ್ಲಿ ಇಂಗುತ್ತಿತ್ತು. ದೂರದ ಗುಡ್ಡಗಾಡುಗಳಲ್ಲಿ ಬಿದ್ದ ಮಳೆ ಹರಿದು ಹಿಂಗುವ ಜಾಗ ಏಡನ್ ನಗರದಿಂದ

* ವಿಶ್ರಾಂತ ಉಪನ್ಯಾಸಕರು-ಲೇಖಕರು, 'ಜ್ಯೋತಿರ್ಲಿಂಗ', ೧ನೇ ತಿರುವು, ಹೈಸ್ಕೂಲ್ ಬಡಾವಣೆ, ಶಿವಮೊಗ್ಗ ರಸ್ತೆ, ಹೊನ್ನಾಳಿ.

೧೮ ಮೈಲು ದೂರದಲ್ಲಿತ್ತು. ಇಲ್ಲಿ ನೆಲದಾಳದಿಂದ ನೀರಿನ ಜಲಾಶಯವಿರುವುದನ್ನು ಗುರುತಿಸಿದರು. ಕುಡಿಯುವ ನೀರಿನ ವ್ಯವಸ್ಥೆ ಯೋಜಿಸಿದರು. ವಿಶ್ವೇಶ್ವರಯ್ಯನವರ ಈ ಕೊಡುಗೆಯನ್ನು ಏಡನ್‌ನಗರ ಸ್ಮರಿಸುತ್ತದೆ. ಬ್ರಿಟಿಷ್ ಸರಕಾರ ಕೈಸರ್ ಏ ಹಿಂದ್ ಬಿರುದು ನೀಡಿ ಗೌರವಿಸಿತು.

೧೯೦೮ ಸೆಪ್ಟೆಂಬರ್ ೨೮ರಂದು ಹೈದರಾಬಾದ್ ನಗರದ ಮೇಲೆ ವಿನಾಶಕಾರಿ ಪ್ರವಾಹ ಹರಿದು ೨೨೧ ಕೆರೆಗಳು ಒಡೆದು ೨೦೦೦ಕ್ಕೂ ಹೆಚ್ಚು ಜನ ಪ್ರವಾಹದಲ್ಲಿ ಕೊಚ್ಚಿ ಹೋದರು. ಲಕ್ಷಾಂತರ ಮನೆಗಳು ಮುರಿದವು. ಜಾನುವಾರುಗಳು ಕೊಚ್ಚಿ ಹೋದವು. ವಿಶ್ವೇಶ್ವರಯ್ಯನವರು ಸೂಕ್ತ ಯೋಜನೆ ರೂಪಿಸಿ ನಿಜಾಮರಿಗೆ ಹಸ್ತಾಂತರಿಸಿದರು.

ಈ ಲೇಖನದ ಪ್ರಾರಂಭದಲ್ಲಿ ಉಲ್ಲೇಖಿಸಿದ ಪತ್ರದ ಪ್ರಕಾರ ವಿಶ್ವೇಶ್ವರಯ್ಯನವರು ತಮ್ಮ ಈ ಅಭಿಪ್ರಾಯವನ್ನು ಈ ರೀತಿ ನಿವೇದಿಸಿದರು. ರಾಜ್ಯದಲ್ಲಿ ವಿಶೇಷ ಪ್ರಮಾಣದಲ್ಲಿ ಕೈಗಾರಿಕೆಗಳ ಸ್ಥಾಪನೆ ಮತ್ತು ತಾಂತ್ರಿಕ ಶಿಕ್ಷಣವನ್ನು ಆರಂಭಿಸುವ ಯಾವುದಾದರೂ ದೂರದೃಷ್ಟಿಯ ಮಹತ್ತರ ಯೋಜನೆ ಸರಕಾರದ ಮುಂದಿದೆಯೆ ಅಥವಾ ಈಗಿರುವಂತೆ ಸಾಮಾನ್ಯ ಇಂಜಿನಿಯರುಗಳ ಸೇವೆಯೇ ಎಂಬ ಎಂಬ ವಿವರಣೆ ಕೇಳಿ ಸಕಾರಾತ್ಮಕವಾಗಿ ಉತ್ತರ ಹೊಂದಿದ ನಂತರ ೧೯೦೯ ನವೆಂಬರ್ ೧೫ರಂದು ಸರ್.ಎಂ.ವಿ. ರವರು ಮೈಸೂರು ಸಂಸ್ಥಾನದ ಮುಖ್ಯ ಇಂಜಿನಿಯರ್ ಆಗಿ ಸೇವೆಗೆ ಸೇರಿದರು. ತಾಂತ್ರಿಕ ಶಿಕ್ಷಣ, ಕೈಗಾರಿಕಾಭಿವೃದ್ಧಿ ಸಮಿತಿಗಳ ಅಧ್ಯಕ್ಷರಾದರು. ಈಗಾಗಲೇ ೧೯೦೨ರಲ್ಲಿ ಕಾವೇರಿ ನದಿಯ ನೈಸರ್ಗಿಕ ಹರಿವನ್ನು ಬಳಸಿ ಜಲ ವಿದ್ಯುತ್‌ನ್ನು ಶಿವನಸಮುದ್ರದಲ್ಲಿ ಸ್ಥಾಪಿಸಲಾಗಿತ್ತು. ಈಗ ಕಾವೇರಿ ನದಿಗೆ ಕನ್ನಂಬಾಡಿಯಲ್ಲಿ ಆಣೆಕಟ್ಟು ಕಟ್ಟಿ ಬೃಹತ್ ಜಲಾಶಯವನ್ನು ನಿರ್ಮಾಣ ಮಾಡಿ ನೀರಾವರಿಗೆ ನೀರನ್ನು ವಿದ್ಯುಚ್ಛಕ್ತಿಯನ್ನು ನೀಡಿದರು. ೧೯೧೧ರಿಂದ ಪ್ರಾರಂಭಿಸಿ ೧೯೧೫ಕ್ಕೆ ಮುಗಿಸಿದರು. ಕೇವಲ ನಾಲ್ಕು ವರ್ಷಗಳಲ್ಲಿ ಇಂಥ ಬೃಹತ್ ಅಣೆಕಟ್ಟು ಮುಕ್ತಾಯವಾಗಿರುವುದು, ಸ್ವಯಂ ಚಾಲಿತ ಗೇಟುಗಳನ್ನು ಅಳವಡಿಸಿದ್ದು ಜಗತ್ತಿನಲ್ಲಿ ಇದೇ ಮೊದಲು. ಈ ನಡುವೆ ೧೯೧೨ ನವೆಂಬರ್ ತಿಂಗಳಲ್ಲಿ ಮಹಾರಾಜರು ಅಂದಿನ ದಿವಾನರಾಗಿದ್ದ ಟಿ. ಆನಂದ ರಾಯರ ನಂತರ ದಿವಾನರಾಗಲು ವಿಶ್ವೇಶ್ವರಯ್ಯನವರಿಗೆ ಆಜ್ಞೆ ಮತ್ತು ಅವಕಾಶ ನೀಡಿದರು. ಜನಸೇವೆಗೆ ಅವಕಾಶ ಒದಗಿಸುವ ಈ ಪದವಿಯನ್ನು ಒಪ್ಪಿದರು. ಆಗಿನ ಕಾಲದಲ್ಲಿ ದಿವಾನರೆಂದರೆ ಈಗಿನ ಮುಖ್ಯಮಂತ್ರಿ ಹುದ್ದೆಗಿಂತಲೂ ಹೆಚ್ಚಿನ ಅಧಿಕಾರ. ಮನಸ್ಸು ಮಾಡಿದ್ದರೆ ಅಪಾರ ಸಂಪತ್ತು ಗಳಿಸಬಹುದಿತ್ತು. ಭೋಗ ವಿಲಾಸಗಳನ್ನು ಅನುಭವಿಸ ಬಹುದಿತ್ತು. ಬದುಕಿನುದ್ದಕ್ಕೂ ಬಾಡಿಗೆ ಮನೆಯಲ್ಲಿ ವಾಸಿಸಿದರು. ದಿವಾನ್ ಹುದ್ದೆಯನ್ನು ಸ್ವೀಕರಿಸುವ ಮೊದಲು ತನ್ನ ಸಂಬಂಧಿಕರು ಯಾರು ತನ್ನಿಂದ ನೌಕರಿ ಮುಂತಾದ ಸರಕಾರಿ ಸಹಾಯ ಬಯಸಬಾರದೆಂದು ಶರತ್ತು ಹಾಕಿದ್ದರಲ್ಲದೇ ತಾಯಿಯಿಂದ ವಚನ ಪಡೆದಿದ್ದರು. ತೀರ ನಿರ್ಗತಿಕ ಸ್ಥಿತಿಯಲ್ಲಿದ್ದ ಸಂಬಂಧಿಕರೋರ್ವರು ನೌಕರಿ ಕೇಳಿದಾಗ ಅವರಿಗೆ ತನ್ನ ಸಂಬಳದಿಂದ ಪ್ರತಿ ತಿಂಗಳೂ ಹಣ ಕಳುಹಿಸುತ್ತಿದ್ದರೇ ವಿನಃ ನೌಕರಿ ಕೊಡಲಿಲ್ಲ. ಖಾಸಗಿ ಕಾರ್ಯಗಳಿಗೆ ಸರಕಾರದ ಕಾರು, ಕಾಗದ ಮೇಣದಬತ್ತಿಯನ್ನು ಸಹ ಬಳಸುತ್ತಿದ್ದಿಲ್ಲ. ಅಧಿಕಾರದ ದುರುಪಯೋಗ ಭ್ರಷ್ಟಾಚಾರ ಅತಿ ದೂರ. ದಿವಾನರಾದಾಗ ಮಹಾರಾಜರು ಸಂಬಳ ಹೆಚ್ಚು ಮಾಡಲು ನಿರ್ಧರಿಸಿದಾಗ ಆ ವಿಷಯ ತಿಳಿದು ಇದು ನನಗೆ ಇಷ್ಟವಿಲ್ಲ ಎಂದು ತಿಳಿಸಿದರು. ಭದ್ರಾವತಿ ಕಾರ್ಖಾನೆಯ ಅಧ್ಯಕ್ಷರಾದಾಗ ಸಂಬಳವನ್ನು ಸರಕಾರ ಕೊಡಬೇಕಾಗಿತ್ತು. ಅದು ತೀರ್ಮಾನವಾಗಿ ಹಲವು ವರ್ಷದ ನಂತರ ಒಂದು ಲಕ್ಷ ಬಂದಾಗ ತಾಂತ್ರಿಕ ವಿದ್ಯಾಲಯಕ್ಕೆ ನೀಡಿದರು. ಆಗ ಸರಕಾರ ವಿಶ್ವೇಶ್ವರಯ್ಯನವರ ಹೆಸರು ಇಡಲು ನಿರ್ಧರಿಸಿದಾಗ ಅದನ್ನು ನಿರಾಕರಿಸಿ ಮಹಾರಾಜರ ಹೆಸರನ್ನು ಇಡಲು ಸೂಚಿಸಿದರು. ಮೈಸೂರು ದರ್ಬಾರಿನಲ್ಲಿ ಬ್ರಿಟಿಷ್ ಅಧಿಕಾರಿಗಳು ಬಂಧು ಬಳಗದವರು ಖುರ್ಚಿಯ ಮೇಲೆ ಕುಳಿತರೆ ದೇಶೀ ಅರಸರು ನೆಲದ ಮೇಲೆ ಕುಳಿತುಕೊಳ್ಳಬೇಕಾಗಿತ್ತು ಎಲ್ಲರಿಗೂ ಕುರ್ಚಿಯ ವ್ಯವಸ್ಥೆ ಮಾಡಿದರು. ಒಬ್ಬ ಬ್ರಿಟಿಷ್ ಅಧಿಕಾರಿ ತನ್ನ ಕುರ್ಚಿ ಎತ್ತರವಾಗಿರುವುದರಿಂದ ಕಾಲು ಇಡಲು ದಿಂಬುಬೇಕೆಂದು ಕೇಳಿದ. ಅದಕ್ಕೆ ಎಂ.ವಿ. ಅವರು ಕುರ್ಚಿಯ ಕಾಲುಗಳನ್ನೇ ಕತ್ತರಿಸಿ ಈಗ ಅದರ ಎತ್ತರ ಇಳಿದಿದೆ ತೊಂದರೆಯಾಗದು ಎಂದು ತಿಳಿಸಿದರು. ಸಾಮ್ರಾಜ್ಯ ಶಾಹಿಯ ದರ್ಪಕ್ಕೆ ಮಣಿಯದ ಸ್ವಾಭಿಮಾನಿ.

ಸರ್.ಎಂ.ವಿ. ಅವರ ಸಮಯ ಪ್ರಜ್ಞೆಗೆ ಒಂದು ಘಟನೆ. ಒಬ್ಬ ಬಡ ವಿದ್ಯಾರ್ಥಿಗೆ ನೂರು ರೂಪಾಯಿ ಸಹಾಯಧನ ಮಾಡುವುದಾಗಿ ಹೇಳಿ ಇಷ್ಟು ಹೊತ್ತಿಗೆ ಬರಲು ತಿಳಿಸಿದ್ದರು. ಆದರೆ ಆ ವಿದ್ಯಾರ್ಥಿ ಅತ್ತಿತ್ತ ತಿರುಗಾಡಿ ಮುಕ್ಕಾಲು ಘಂಟೆ ತಡವಾಗಿ ಬಂದನು. ಆಗ ಸರ್.ಎಂ.ವಿ. ಅವರು 'ನೀನು ಒಂದು ಗಂಟೆಯ ಮುಕ್ಕಾಲು ಅಂಶವನ್ನು ವ್ಯರ್ಥ ಮಾಡಿರುವಿ, ನಿನಗೆ ಸಮಯದ ಬೆಲೆ ತಿಳಿಯಲಿ





ಸರ್.ಎಂ.ವಿ. ೧೯೧೨ರಿಂದ ೧೯೧೮ರ ಅವಧಿಯಲ್ಲಿ ಮಾಡಿದ ಸಾಧನೆಗಳು ಅಪಾರ. ಕನ್ನಂಬಾಡಿ ಅಣೆಕಟ್ಟು, ಈಗಿನ ಎಚ್‌ಎಎಲ್, ಭದ್ರಾವತಿ ಕಬ್ಬಿಣ–ಉಕ್ಕು ಕಾರ್ಖಾನೆ, ಸಾಬೂನು ಕಾರ್ಖಾನೆ, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಕನ್ನಡ ಸಾಹಿತ್ಯ ಪರಿಷತ್ತು. ಮೈಸೂರು ವಿ.ವಿ. ಶಿವನಸಮುದ್ರ, ಜೋಗದ ಜಲ ವಿದ್ಯುತ್ ಯೋಜನೆ, ಬ್ಲಾಕ್ ಸಿಸ್ಟಮ್, ಸಕ್ಕರೆ ಕಾರ್ಖಾನೆ, ಮೈಸೂರು ಸ್ಯಾಂಡಲ್ ಸೋಪ್, ಪ್ರಿಂಟಿಂಗ್ ಪ್ರೆಸ್, ಭಟ್ಕಳ ಬಂದರು, ಶ್ರೀಗಂಧ ಎಣ್ಣೆ ತಯಾರಿಕೆ, ಹಿಂದೂ ಮಾಡರ್ನ್ ಹೋಟೆಲ್, ಬೆಂಗಳೂರಿನ ಸಾರ್ವಜನಿಕ ಗ್ರಂಥಾಲಯಗಳು, ಬೆಂಗಳೂರು ವಿವಿ ಎಂಜಿನಿಯರಿಂಗ್ ಕಾಲೇಜು, ಜಯಚಾಮರಾಜೇಂದ್ರ ವೃತ್ತಿ ತರಬೇತಿ ಸಂಸ್ಥೆ, ಹೆಬ್ಬಾಳದ ಕೃಷಿ ಸಂಶೋಧನಾ ಕೇಂದ್ರ, ಕಡ್ಡಾಯ ಪ್ರಾಥಮಿಕ ಶಿಕ್ಷಣ ಜಾರಿ ಇವೆಲ್ಲ ಅವರ ದೂರದೃಷ್ಟಿಯ ಫಲಗಳು. ೧೯೧೫ರಲ್ಲಿ ಬ್ರಿಟಿಷ್ ಸರಕಾರ ನೈಟ್ ಪದವಿ ಕೊಟ್ಟಿ ಗೌರವಿಸಿದರು.

೧೯೧೬ರಲ್ಲಿ ಜೋಗಕ್ಕೆ ಭೇಟಿ ನೀಡಿದಾಗ ಸೌಂದರ್ಯ ಕಂಡರು. ಆದರೆ ಶರಾವತಿ ಶಕ್ತಿ ದೇವತೆಯ ವಿಶ್ವರೂಪವಾಗಿ ಕಂಡಳು. ಓಹ್ ಎಂಥ ಅದ್ಭುತ ವ್ಯರ್ಥ! ಎಂದು ಉದ್ಗರಿಸಿ, ಶರಾವತಿಯ ಆಂತರಿಕ ಶಕ್ತಿಯನ್ನು ಜನಕಲ್ಯಾಣಕ್ಕೆ ಪಳಗಿಸಲು ಸಂಕಲ್ಪಸಿದ್ಧಿ ಹೊಂದಿದರು. ಅದರ ಫಲವೇ ವಿದ್ಯುದಾಗಾರದ ನಿರ್ಮಾಣ.

ಐ.ಟಿ.ಗೆ ಬೀಜ ಬಿತ್ತಿದವರೇ ಸರ್.ಎಂ.ವಿ. ಅವರು ಸ್ಥಾಪಿಸಿದ ಹಿಂದುಸ್ತಾನ ಏರ್‌ಕ್ರಾಪ್ಟ್ ಫ್ಯಾಕ್ಟರಿ. ಏರೋನಾಟಿಕ್ಸ್ ಡಿಪಾರ್ಟ್‌ನಿಂದ ಬಾಹ್ಯಾಕಾಶ ಸಂಶೋಧನೆ ಬೆಂಗಳೂರಿನಲ್ಲಿ ಪ್ರಾರಂಭವಾಯಿತು. ಏರ್‌ಪೋರ್ಸ್ ನೆಲೆಯೂ ಬಂತು. ಏರೋನಾಟಿಕ್ಸ್ ಸಂಶೋಧನೆಗಳು ಆರಂಭವಾದವು. ಇದರಿಂದ ಎಲೆಕ್ಟ್ರಾನಿಕ್ಸ್, ಕಂಪ್ಯೂಟರ್ ಉಪಗ್ರಹ ಬಳಕೆ ಸಂಪರ್ಕಜಾಲ ಆರಂಭವಾಯಿತು. ಇವೆಲ್ಲ ಐ.ಟಿ. ಆಗಮನಕ್ಕೆ ದಾರಿ ಮಾಡಿತು.

ಕಾವೇರಿ ನೀರು ಮುಂದೊಂದು ದಿನ ತಮಿಳುನಾಡು, ಕರ್ನಾಟಕದ ನಡುವೆ ವಿವಾದ ಕೇಂದ್ರ ಆಗಬಹುದು ಎಂದು ಯೋಚಿಸಿದ್ದರು. ಎಂ.ವಿ. ಯೋಜನೆಯನ್ನು ರೂಪಿಸುತ್ತಿದ್ದ ಸಮಯದಲ್ಲಿ ಮದ್ರಾಸ್ ಸರಕಾರ ಕನ್ನಂಬಾಡಿಯಿಂದ ೬೦ ಮೈಲು ದೂರದಲ್ಲಿ ಮೆಟ್ಟೂರು ಬಳಿ ಜಲಾಶಯ ನಿರ್ಮಾಣಕ್ಕೆ ಯೋಚಿಸಿತ್ತು. ಕನ್ನಂಬಾಡಿ ನಿರ್ಮಾಣದಿಂದ ಅವರಿಗೆ ಸಾಕಷ್ಟು ನೀರು ಸಿಗುವುದಿಲ್ಲವೆಂಬ ಭೀತಿ ಇದ್ದಿತು. ಸರ್.ಎಂ.ವಿ. ಭಾರತ ಸರ್ಕಾರದ ಅನುಮತಿಯೊಂದಿಗೆ ೧೦,೦೦೦ ಮಂದಿ ಸಮರೋಪಾದಿಯಲ್ಲಿ ಕಾರ್ಯ ಆರಂಭಿಸಿದರು. ೧೩೦ ಅಡಿ ಎತ್ತರಕ್ಕೆ ಅಡಿಪಾಯ ಹಾಕಿಸಿ ಸುಮಾರು ೬೫ ಲಕ್ಷ ರೂ ರಿಸ್ಕ್ ತೆಗೆದುಕೊಂಡರು. ಮುಂದೆ ಮದ್ರಾಸು ಕ್ಯಾತೆ ತೆಗೆಯುವುದು ಖಂಡಿತ ಎಂದು ಅರಿತಿದ್ದ ಸರ್.ಎಂ.ವಿ. ಆಣೆಕಟ್ಟಿನ ಎತ್ತರ ತಗ್ಗಿಸುವುದಕ್ಕೆ ಯಾವುದೇ ಕಾರಣಕ್ಕೂ ಒಪ್ಪಲಿಲ್ಲ.

ಆಣೆಕಟ್ಟು ನಿರ್ಮಾಣವಾಗಿ ಒಂದೂವರೆ ವರ್ಷವಾಗಿತ್ತು. ಮುಂಗಾರಿನಲ್ಲಿ ಭಾರಿ ಮಳೆ ಆಗಿ ಆಣೆಕಟ್ಟು ತುಂಬಿ ಎಲ್ಲ ಬಾಗಿಲುಗಳನ್ನು ತೆಗೆದು ನೀರು ಬಿಡಲಾಯಿತು. ಆದರೂ ಮಳೆ ನಿಲ್ಲಲಿಲ್ಲ. ಒಳ ಹರಿವಿನ ನೀರು ಜಾಸ್ತಿಯಾಯಿತು. ಆಣೆಕಟ್ಟಿನಲ್ಲಿ ನೀರು ಅಪಾಯಕಾರಿ ಮಟ್ಟ ಮುಟ್ಟಲಿದೆ ಎಂದು ಅರಿವಾದಾಗ ಅಧಿಕಾರಿಗಳು ಬೆಚ್ಚಿದರು. ಆಗ ಸರ್.ಎಂ.ವಿ. ಅವರನ್ನು ಸಂಪರ್ಕಿಸಿದಾಗ, ಆಟೋಮ್ಯಾಟಿಕ್ ಲಾಕಿಂಗ್ ಸಿಸ್ಟಂ ಬಳಸಿ ಆಣೆಕಟ್ಟಿನ ಎಲ್ಲ ಬಾಗಿಲುಗಳನ್ನು ಮುಚ್ಚಿಬಿಡಿ ಎಂದಾಗ ಅಧಿಕಾರಿಗಳಿಗೆ ದಿಗಿಲು, ಆಣೆಕಟ್ಟಿನ ಮೇಲಿಂದ ನೀರು ಹರಿದರೆ, ಆಣೆಕಟ್ಟು ನೀರಿನ ರಭಸಕ್ಕೆ ಕೊಚ್ಚಿ ಹೋದರೆ ಎಂದು ಅನುಮಾನ ವ್ಯಕ್ತ ಮಾಡಿದಾಗ ಸರ್.ಎಂ.ವಿ. ಹೇಳಿದ್ದು 'ಆಣೆಕಟ್ಟಿಗೆ ಪ್ಲಾನ್ ಮಾಡಿದ್ದು ನಾನು ಇನ್ನೂ ೧೦೦ ವರ್ಷ ಅದ್ರೂ ಏನೂ ಆಗಲ್ಲ, ಬೇಗ ಬಾಗಿಲು ಮುಚ್ಚಿ' ಎಂದರು, ಇಡೀ ರಾತ್ರಿ ಆಣೆಕಟ್ಟಿನ ಮೇಲಿಂದ ನೀರು ಹರಿಯಿತು ಬೆಳಿಗ್ಗೆ ವೇಳೆ ಎಲ್ಲ ಸರಿಯಾಯಿತು.

ತಮ್ಮ ಹುಟ್ಟೂರಾದ ಮುದ್ದೇನಹಳ್ಳಿಯಲ್ಲಿ ತಾಯಿಯ ಜೊತೆ ಅಮ್ಮನ ಆಸರೆಯಲ್ಲಿ ಇರಬಯಸುತ್ತಿದ್ದರು. ಊರಿನಲ್ಲಿದ್ದಾಗ ಮಿಡ್ಲ್‌ಸ್ಕೂಲ್ ಮಾಸ್ತರರು ಆಹ್ವಾನಿಸಿದರು. ಸ್ವಲ್ಪ ಹೊತ್ತು ಮಕ್ಕಳ ಜೊತೆಗೆ ಕಾಲಕಳೆಯಬೇಕೆಂದೆನಿಸಿ ಶಾಲೆಗೆ ಹೋದರು. ಮಕ್ಕಳಿಗೆಲ್ಲ ಚಾಕಲೇಟ್ ಕೊಟ್ಟು ಸ್ವಲ್ಪ ಹೊತ್ತು ಕಾಲ ಕಳೆದ ನಂತರ ಮಾಸ್ತರರು ನಾಲ್ಕು ಮಾತು ಹೇಳಲು ಕೇಳಿದರು. ಸರ್.ಎಂ.ವಿ. ಅವರು ಒಪ್ಪಿ ಅರ್ಧತಾಸು ಮಾತನಾಡಿದರು. ಆದರೆ, ರಾತ್ರಿ ಹಾಸಿಗೆಯಲ್ಲಿ ಹೊರಳಾಡುತ್ತಾ ನಿದ್ರೆ ಬಾರದೇ ಬರೆದುಕೊಂಡು ಹೋಗದೇ ಭಾಷಣ ಮಾಡಬಾರದಿತ್ತು ಎಂದು ಯೋಚಿಸಿದರು. ಕೊನೆಗೆ ಬೆಳಿಗ್ಗೆ ಎದ್ದು ಭಾಷಣ ತಯಾರಿಸಿಕೊಂಡು, ಶಾಲೆಯ ಮಾಸ್ತರರಿಗೆ ಹೇಳಿ ಕಳುಹಿಸಿ, ಇದ್ದ ವಿಷಯವನ್ನು ಹೇಳಿದರು. ಸಾಯಂಕಾಲ ಶಾಲೆಗೆ ಹೋಗಿ ಬರೆದುಕೊಂಡಿದ್ದ ಓದಿದ ನಂತರವೇ ಅವರ ಮನಸ್ಸಿಗೆ ಸಮಾಧಾನ.

ಮಿರ್ಜಾ ಸಾಹೇಬರು ದಿವಾನರಾಗಿದ್ದಾಗ

ಬೆಂಗಳೂರಿನಲ್ಲಿ ಕೋಮಗಲಭೆ ಸಾವು-ನೋವು ಆದಾಗ ಅವರಿಬ್ಬರ ನಡುವೆ ಭಿನ್ನಾಭಿಪ್ರಾಯ ಉಂಟಾಗಿತ್ತು. ಆದರೂ ಎಂ.ವಿ. ಅವರು ಮಿರ್ಜಾರವರ ಮನೆಗೆ ಹೋಗಿ ಖಾಸಾ ಕೋಣೆಗೆ ಹೋಗಿ ಕುಳಿತರು. ಮಿರ್ಜಾರವರ ಆಸನದ ಹಿಂದೆ ಗೋಡೆಯ ಮೇಲೆ ಪರ್ಶಿಯನ್ ಕವಿ ಫಿರ್ಮಾಸಿ, ನಾಲ್ವಡಿ ಕೃಷ್ಣರಾಜ ಒಡೆಯರು, ಅವರ ತಂದೆಯ ಚಿತ್ರಗಳೊಂದಿಗೆ ತಮ್ಮ ಚಿತ್ರ ಇರುವುದನ್ನು ನೋಡಿ ಆಶ್ಚರ್ಯ ಹೊಂದಿದರು. ಮುನಿಸಿನಿಂದ ಆ ಚಿತ್ರ ತೆಗೆಯಲು ಹೇಳಿದಾಗ ಮಿರ್ಜಾ ಸಾಹೇಬರು ನೀವು ನನಗೆ ತಂದೆ ಸಮಾನ ಅದಕ್ಕೆ ನನ್ನ ತಂದೆಯ ಚಿತ್ರದೊಂದಿಗೆ ಇಟ್ಟಿರುವೆ ಎಂದಾಗ ಆ ವ್ಯಕ್ತಿಯ ಮನೋಭಾವನೆ ಮಾತುಗಳನ್ನು ಕೇಳಿ ಮುನಿಸು ಮಾಯವಾಗಿ ಮಂದಹಾಸ ಮಿನುಗಿತು. ಎಂ.ವಿ. ಅವರ ಕಣ್ಣೆದುರು ಮಿರ್ಜಾರ ಅಶ್ರುಗಳು ಉದುರಿದುವು.

ಎಂ.ವಿ. ಅವರು ಪುಣೆಯಲ್ಲಿದ್ದಾಗ ಗೋಖಲೆಯವರೊಂದಿಗೆ ಆತ್ಮೀಯತೆ ಬೆಳೆಯಿತು. ಅಣ್ಣತಮ್ಮಂದಿರ ಭಾವನೆ ಉಂಟಾಯಿತು. ಗೋಖಲೆಯವರ ಆರೋಗ್ಯಭಾಗ್ಯ ಅಷ್ಟಕ್ಕಷ್ಟೆ. ಮೇಲಿಂದ ಮೇಲೆ ಹಾಸಿಗೆ ಹಿಡಿಯುತ್ತಿದ್ದರು. ಅದಕ್ಕಾಗಿ ಒಂದು ಪತ್ರ ಬರೆದು, ಕ್ಲುಪ್ತಕಾಲಕ್ಕೆ ಭೋಜನ, ವ್ಯಾಯಾಮ, ವಿಶ್ರಾಂತಿ ಆಹಾರದಲ್ಲಿ ವ್ಯರ್ಜಾವರ್ಜ್ಯಗಳು ಈ ವಿಷಯಗಳಿಗೆ ಗಮನಕೊಟ್ಟು ಮೈಯನ್ನು ದೃಢಪಡಿಸಿಕೊಳ್ಳಿ ಎಂದು ಸಲಹೆ ಕೊಟ್ಟರು. ಇದನ್ನು ಡಿ.ವಿ.ಜಿ.ಯವರು ಜ್ಞಾಪಕಚಿತ್ರಶಾಲೆಯಲ್ಲಿ ಸ್ಮರಿಸುತ್ತಾರೆ.

೧೯೫೦ರ ಆರಂಭದಲ್ಲಿ ಡಾ॥ ಲೋಹಿಯಾ ಅವರು ಸರ್.ಎಂ.ವಿ. ಅವರನ್ನು ಬೆಂಗಳೂರಿನಲ್ಲಿ ಭೇಟಿಯಾಗುತ್ತಾರೆ. ನಂತರ ಎಂ.ವಿ. ಅವರ 'Memories of my working life' ಕೃತಿಯನ್ನು ವಿಮರ್ಶಿಸುತ್ತ -ಶ್ರೀ ವಿಶ್ವೇಶ್ವರಯ್ಯನವರಿಗೆ ಈಗ ೯೬ ವರ್ಷ. ಈ ದೇಶದ ಅತ್ಯುನ್ನತ ಯಂತ್ರಶಿಲ್ಪಿಗಳು. ಗಾಂಧಿ ನಂತರದ ಎರಡನೇ ಸ್ಥಾನದವರು. ಹರಿತವಾದ ಬುದ್ಧಿ ಮತ್ತು ಅಸಾಧ್ಯ ಶ್ರಮದ ಬದುಕು ಸುದೀರ್ಘವಾದ ಸರಳ ಜೀವನ ಇವುಗಳನ್ನು ಪಡೆದು ನಮ್ಮೆದುರಿಗಿರುವ ಒಬ್ಬ ಮನುಷ್ಯನ ಜೀವನದ ನೆನಪುಗಳು' ಎಂದರು.

ಬ್ರಿಟಿಷ್ ಸರಕಾರದ ಸರ್ ಪದವಿ ಬನಾರಸ್, ಆಂಧ್ರ ವಿ.ವಿ.ದ ಡಿ.ಲಿಟ್ ಪದವಿ, ಮೈಸೂರು ವಿ.ವಿ. ದ ಡಾಕ್ಟರೇಟ್ ಪದವಿ ಮತ್ತು ಇತರ ಉನ್ನತ ಪದವಿ ಗೌರವ ಪ್ರಶಸ್ತಿಗಳೊಂದಿಗೆ ೧೯೫೫ರಲ್ಲಿ ಭಾರತ ಸರಕಾರದ ಪರಮೋಚ್ಚ ಪ್ರಶಸ್ತಿ 'ಭಾರತರತ್ನ' ಪಡೆದರು. ತಮ್ಮ ೯೦ ರ ಪ್ರಾಯದಲ್ಲೂ ದಿನಕ್ಕೆ ೧೫ ಗಂಟೆಗಳ ಕಾಲ ದುಡಿಯುತ್ತಿದ್ದರು. ನಡೆಯಲು ವಾಕಿಂಗ್ ಸ್ಟಿಕ್ ಅವಶ್ಯಕತೆ ಇರಲಿಲ್ಲ. ದೃಷ್ಟಿ ಕುಂದಿರಲಿಲ್ಲ. ಬರೆಯಲು ಇನ್ನೊಬ್ಬರ ನೆರವು ಬೇಕಾಗಿರಲಿಲ್ಲ, ಅರ್ಧಗಂಟೆ ನಿಂತೇ ಭಾಷಣ ಮಾಡುತ್ತಿದ್ದರು. ಆಗ ಅವರಿಗೆ ನೂರು ವರ್ಷ!' ದೀರ್ಘಾಯುಷ್ಯದ ಗುಟ್ಟು ಏನು ಎಂದು ಕೇಳಿದಾಗ 'Eat a while, walk a mile' 'ಕಡಿಮೆ ಊಟ ಮಾಡಿ ಸಾಧ್ಯವಾದಷ್ಟು ಜಾಸ್ತಿ ವಾಕ್ ಮಾಡಿ' ಎಂದ್ದರಂತೆ.

೧೯೬೨ಏಪ್ರಿಲ್ ೧೨ರ ಬೆಳಿಗ್ಗೆ ೬.೧೫ಗಂಟೆಗೆ ಸರ್.ಎಂ.ವಿ. ಅವರು ಬೆಂಗಳೂರಿನಲ್ಲಿ ನಿಧನರಾದರು. ಆಗ ಅವರಿಗೆ ೧೦೨ ವರ್ಷ. ೫ ದಶಕಗಳು. ಸಂದರೂ ಸರ್.ಎಂ.ವಿ. ಅವರ ಹುಟ್ಟಿದ ಊರು ಮುದ್ದೇನಹಳ್ಳಿ ಮತ್ತು ಅವರ ಸಮಾಧಿ ಅಭಿವೃದ್ಧಿ ಹೊಂದಿಲ್ಲ. ಸಮಾಧಿ ಹತ್ತಿರ ರಾತ್ರಿ ಕತ್ತಲು ಕೋಲಾರ ಜಿಲ್ಲೆಗೆ ಪ್ರಥಮವಾಗಿ ಬೆಳಕು ತಂದ ಸರ್.ಎಂ.ವಿ. ಸಮಾಧಿ ಕತ್ತಲಲ್ಲೇ ಇದೆ. ಮನೆಯು ವಸ್ತು ಸಂಗ್ರಹಾಲಯ ಆಗಿದ್ದರೂ ಸರಿಯಾದ ನಿರ್ವಹಣೆ ಇಲ್ಲ ಮತ್ತು ಬಾಗಿಲು ಸಹ ತೆರೆಯುತ್ತಿಲ್ಲ. ಸ್ಮಾರಕವನ್ನು ಸಹ ನಿರ್ಲಕ್ಷಿಸಲಾಗಿದೆ.

ಈಗ ರಾಜ್ಯ ಸರಕಾರ ಮಹಾನ್ ನಾಯಕನಿಗೆ ನಮನ ಸಲ್ಲಿಸುವುದಾದರೆ ಅವರ ಮನೆಯನ್ನು ವ್ಯವಸ್ಥಿತ ರೀತಿಯಲ್ಲಿ ಇಟ್ಟು ಸುಣ್ಣ-ಬಣ್ಣ ಮಾಡಿಸಿ ಪ್ರತಿಮೆಯನ್ನು ಸುರಕ್ಷಿತವಾಗಿರಿಸಿ ಸ್ಮಾರಕದ ಸ್ಥಳವನ್ನು ಪವಿತ್ರ ಸ್ಥಳವನ್ನಾಗಿ ಮಾಡಬೇಕು. ಕೇವಲ ಸೆಪ್ಟೆಂಬರ್ ೧೫ ರಂದು ಇವರ ಗುಣಗಾನ ಮಾಡಿ ಮರೆತು ಬಿಡಲಾರದು. ನಮ್ಮ ಎಳೆಯ ಪೀಳಿಗೆಗಳಿಗೆ ಈ ಕಾರ್ಯಗಳಿಂದ, ಅವರ ಬಗ್ಗೆ ಪುಸ್ತಕಗಳ ಪ್ರಕಟಣೆಯಿಂದ ಆದರ್ಶದ ಉದಾಹರಣೆಯಾಗುತ್ತದೆ. ಇಂದಿನ ಭ್ರಷ್ಟತೆಯ ಸವಾಲುಗಳನ್ನು ಎದುರಿಸುತ್ತಿರುವ ಸಮಾಜದಲ್ಲಿ ಎಂ.ವಿ. ಅವರ ಪ್ರಾಮಾಣಿಕತೆ ಸಮಯ ಪರಿಪಾಲನೆ, ನಿಸ್ವಾರ್ಥ ಸೇವೆ ದಾರಿದೀಪವಾಗಬಲ್ಲದು.

ಕೊನೆಮಾತು : 'ನಾನು ಐದು ವರ್ಷ ಕಾಲ, ಇಲ್ಲಿದ್ದು ನನ್ನ ಕೈಯಲ್ಲಾದ ಕೆಲಸ ಮಾಡಲು ಅನುಕೂಲಿಸಿದ್ದು ಯಾವುದರಿಂದ ಗೊತ್ತಿದೆಯೇ? ನನ್ನ ಜೇಬಿನಲ್ಲಿ ಯಾವಾಗಲೂ ರಾಜಿನಾಮೆಯ ಚೀಟಿ (Quarter sheet) ಸಿದ್ಧವಾಗಿಟ್ಟುಕೊಂಡದ್ದರಿಂದ, ನನ್ನ ತತ್ತ್ವಕ್ಕೆ ಭಂಗ ಬರುವುದಾದರೆ ನಾನು ಸ್ಥಳ ಬಿಟ್ಟು ಹೊರಡುವುದಿಲ್ಲ. ಇದನ್ನು ಶ್ರೀ ಮನ್ಮಹಾರಾಜರಿಗೆ ಸ್ಪಷ್ಟಪಡಿಸಿದ್ದೆ. ವಿಶ್ವೇಶ್ವರಯ್ಯನವರು ಡಿ.ವಿ. ಗುಂಡಪ್ಪನವರಿಗೆ ತಿಳಿಸಿದ್ದು.

❖







# ವಿಶ್ವದ ಅನುಭಾವಿಗಳ ಸಂತರಲ್ಲಿ ಕಂಗೊಳಿಸುವ ರತ್ನತ್ರಯರು -ತಿರುವಳ್ಳುವರ್

-ಡಾ॥ ಆರ್.ಬಿ. ಚಿಲುಮಿ *

ತಮಿಳಿನ ತಿರುವಳ್ಳುವರ್, ತೆಲುಗಿನ ವೇಮನ, ಕನ್ನಡದ ಸರ್ವಜ್ಞ - ಈ ಮೂವರೂ ಸ್ವಾನುಭವ ಸಾರ್ವಭೌಮರು. ಸ್ವತಂತ್ರ ಧೀರೋದಾತ್ತ, ಕವಿಗಳು. ಯಾರ ಹಂಗಿಲ್ಲದೆ ಭಿಡೆ-ಮುರವತ್ತುಗಳಿಗೊಳಗಾಗದೇ ತಂತಮ್ಮ ನಾಡಿನಲ್ಲಿದ್ದುಕೊಂಡು, ನಾಡಿನುದ್ದಕ್ಕೂ ತುಂಡು ಬಟ್ಟೆಯುಟ್ಟುಕೊಂಡು ಸಂಚರಿಸಿ, ಲೋಕಾನುಭವವನ್ನು ಪಡೆದುಕೊಂಡು ಆಧ್ಯಾತ್ಮದನುಭಾವವನ್ನು ಲೋಕದ ಜನತೆಗೆ ಉಣಬಡಿಸಿದವರು. ತಿರುವಳ್ಳುವರ್ ಕವಿಯು ದ್ವಿಪದದಲ್ಲಿ ತನ್ನ ಕೃತಿ 'ತಿರುಕ್ಕುರುಳ್' ಕಾವ್ಯ ರಚಿಸಿದರೆ, ತೆಲುಗಿನಲ್ಲಿ ವೇಮನನು ಚೌಪದದಲ್ಲಿ ಸುಮಾರು ೫೦೦೨ ಪದ್ಯಗಳನ್ನು ರಚಿಸಿರುವನು. ಅದೇ ರೀತಿಯಾಗಿ ಸರ್ವವನು ಬಲ್ಲ ಕನ್ನಡದ ಸರ್ವಜ್ಞನು ವಾಮನ ಗಾತ್ರದ ತ್ರಿಪದಿಯಲ್ಲಿ ಸುಮಾರು ೭೦೭೦ರ ಮೇಲ್ಪಟ್ಟು ರಚಿಸಿದ ಕೀರ್ತಿ ಈತನದು. ಇವರದು ಸರ್ವಸ್ವತಂತ್ರ ಧೀರಪ್ರವೃತ್ತಿ! ಇದ್ದುದನ್ನು ಇದ್ದಂತೆಯೇ ಹೇಳುವಂತಹ ಮನೋಧರ್ಮದವರು. ಇವರು ತ್ರಿಮೂರ್ತಿಗಳಂತೆ ಕಾರ್ಯವೆಸಗಿದವರು. ಇವರು ಕ್ರಮವಾಗಿ ದ್ವಿಪದಿ, ಚೌಪದಿ, ತ್ರಿಪದಿಗಳಲ್ಲಿ ಇಹಪರ ಲೌಕಿಕ ವಿಷಯಗಳೆಲ್ಲವುಗಳ ಬಗ್ಗೆ ತ್ರಿಕಾಲಾ ಬಾಧಿತವಾದ ಸ್ವಾನುಭವ ಸಾಹಿತ್ಯ ಸೃಜಿಸಿ ಅಮರರಾಗಿ ಹೋಗಿದ್ದಾರೆ. ಇವರು ರಚಿಸಿದ ಸಾಹಿತ್ಯಗಳು ಗಣ್ಯ ಸ್ಥಾನವನ್ನು ಹೊಂದಿ ವಿಶ್ವವಿಖ್ಯಾತವಾಗಿವೆ. ಅದರಲ್ಲೂ ೧೨ನೆಯ ಶತಮಾನದಲ್ಲಿ ಆಗಿ ಹೋದ ತಮಿಳು ಕವಿ 'ತಿರುವಳ್ಳುವರ್ ಕವಿಯ' 'ತಿರುಕ್ಕುರುಳ್' ಕಾವ್ಯ ೧೩೩೦ ಸಾಲುಗಳುಳ್ಳ ೧೩೩ ಅಧಿಕಾರಗಳ ಧರ್ಮ-ಅರ್ಥ-ಕಾಮ ಗಳೆಂಬ ಮೂರು ಭಾಗಗಳಲ್ಲಿ ಬಿತ್ತರಗೊಂಡಿದೆ. ಇದು ತಮಿಳರ ವೇದವೆಂದೇ ಕರೆಯಿಸಲ್ಪಟ್ಟಿದೆ. ಇದು ಭಾರತದ ಎಲ್ಲ ಭಾಷೆಗಳಲ್ಲಿಯೂ ಮತ್ತು ಜರ್ಮನ್, ಫ್ರೆಂಚ್, ಆಂಗ್ಲ ಭಾಷೆಗಳಲ್ಲಿಯೂ ಅನುವಾದಗೊಂಡಿದೆಯೆಂದರೆ ಅದರ ಶ್ರೇಷ್ಠತೆಯ ಬಗ್ಗೆ ಊಹಿಸಿಕೊಳ್ಳಬಹುದು. ಇದೊಂದು ಮಾನವ ಕುಲಕ್ಕೆ ನೀತಿಬೋಧಕ ಕಾವ್ಯವಾಗಿದೆ.

ತಿರುವಳ್ಳುವರ್ ಕವಿಯು ರಾಮಾಯಣದ ವಾಲ್ಮೀಕಿ ಮಹರ್ಷಿಯಂತೆಯೇ ವ್ಯಕ್ತಿತ್ವ ಹೊಂದಿದವನು ಮತ್ತು ಬಹು ಪ್ರಾಚೀನ ಕಾಲದಲ್ಲಿ ಅಂದರೆ ಕ್ರಿ.ಶ. ೨೦೦ರಲ್ಲಿದ್ದವನೆಂಬುದನ್ನು ವಿದ್ವಾಂಸರು ಅಭಿಪ್ರಾಯಪಟ್ಟಿದ್ದುಂಟು. ಆತನನ್ನು ಮಹರ್ಷಿಯ ಸ್ಥಾನದಲ್ಲಿರಿಸಿ ಪೂಜನೀಯವಾಗಿ ಕಂಡ ತಮಿಳರು ಮದ್ರಾಸ್ ಪಟ್ಟಣದ ಮೈಲಾಪುರದಲ್ಲಿರುವ ಈತನ ಸಮಾಧಿಯನ್ನು ಶತಮಾನಗಳಷ್ಟು ಹಿಂದಿನಿಂದ ವೀರಶೈವ ಅರ್ಚಕರೇ ಪೂಜಿಸಿಕೊಂಡು ಬರುತ್ತಿರುವುದು ಇಲ್ಲಿ ಗಮನಾರ್ಹವಾಗಿದೆ. ಅಲ್ಲಿರುವ ತಿರುವಳ್ಳೂವರ್ ವಿಗ್ರಹದ; ಆತನ ಹೆಂಡತಿಯ ವಿಗ್ರಹದ ತಲೆಯಲ್ಲಿ ಲಿಂಗಧಾರಣ ಚಿನ್ಹೆಯಿದೆ ಎಂದು ಪಂಡಿತರತ್ನಂ ಬಿ. ಶಿವಮೂರ್ತಿ ಶಾಸ್ತ್ರಿಗಳು ಹೇಳುತ್ತಾರೆ. ಇಷ್ಟೊಂದು ದಿವ್ಯಜ್ಞಾನವನ್ನೊಳಗೊಂಡ ಸೂತ್ರಗಳನ್ನುಳ್ಳ ಇನ್ನೊಂದು ಗ್ರಂಥವು ವಿಶ್ವಸಾಹಿತ್ಯದಲ್ಲಿಯೇ ವಿರಳವೆಂದೇ ಖ್ಯಾತಿ ಹೊಂದಿದೆ. ಈ ಮಾತು ಪರಮಾಶ್ಚರ್ಯವಲ್ಲವೇ? ಇಷ್ಟೊಂದು ದಿವ್ಯಜ್ಞಾನವನ್ನೊಳಗೊಂಡ, ಸೂತ್ರಗಳನ್ನುಳ್ಳ ಇನ್ನೊಂದು ಗ್ರಂಥವು ವಿಶ್ವದಲ್ಲಿಯೇ ಇಲ್ಲವೆಂಬ ಖ್ಯಾತಿಯಿದಕ್ಕಿದೆ. ವಿಷ್ಣು ಕುರುಳಾಗಿ (ಕುಳ್ಳನಾಗಿ -ವಾಮನನಾಗಿ) ಭೂ, ಗಗನಗಳನ್ನು ಎರಡು ಪಾದಗಳಿಂದ ಅಳೆದಂತೆ ತಿರುವಳ್ಳುವರ್ ತನ್ನ ಕುರುಳ್(ಸಣ್ಣ) ಪದ್ಯಗಳ ಎರಡು ಪಾದಗಳಿಂದ ಪ್ರಪಂಚವನ್ನೆಲ್ಲಾ ಅಳೆದಿದ್ದಾನೆ ಎಂಬ ಕೀರ್ತಿಗೆ ಭಾಜನನಾಗಿದ್ದಾನೆ. ಸಾಸಿವೆ ಕಾಳಿನಲ್ಲಿ ಸಪ್ತ ಸಮುದ್ರಗಳನ್ನು ಸೆರೆಹಿಡಿದಂತೆ ಎಂಬ ಶ್ರೇಷ್ಠತೆಗೆ ಪಾತ್ರವಾದ ಕುರುಳ್ (ಸಣ್ಣ) ಪದ್ಯಗಳ ಎರಡು ಪಾದಗಳಿಂದ ಪ್ರಪಂಚವನ್ನೆಲ್ಲಾ ಅಳೆದಿದ್ದಾನೆ ಎಂಬ ಕೀರ್ತಿಗೆ ಭಾಜನನಾಗಿದ್ದಾನೆ. ಸಾಸಿವೆ ಕಾಳಿನಲ್ಲಿ ಸಪ್ತ ಸಮುದ್ರಗಳನ್ನು ಸೆರೆಹಿಡಿದಂತೆ ಎಂಬ ಶ್ರೇಷ್ಠತೆಗೆ ಪಾತ್ರವಾದ ಕುರುಳ್ ವೇಮನ ಮತ್ತು ಸರ್ವಜ್ಞರ ಮೇಲೆ ಪರಿಣಾಮವನ್ನು ಬೀರಿರಬೇಕೆಂದೂ ಊಹಿಸಬಹುದಾಗಿದೆ. ಆದರೆ ಕಾಲಮಾನವನ್ನು ಗಣಿಸಿದರೆ ಬಹಳ

* ವಿಶ್ರಾಂತ ಪ್ರಾಧ್ಯಾಪಕರು, 'ಹೊಂಬೆಳಕು', ಮನೆ ನಂ. ೧೧೨-೧೧೩ ಓಂ ಹೈಸ್ಕೂಲ್ ಹತ್ತಿರ, ಧಾರವಾಡ-೫೮೦ ೦೦೩.

ವ್ಯತ್ಯಾಸವಿದೆ. ಮೂವರೂ ಹೇಳಿದ ತೂಕಬದ್ಧ ಮಾತುಗಳು ಜನಜೀವನಕ್ಕೆ ಅಪ್ಯಾಯಮಾನವೂ, ತರ್ಕಬದ್ಧವೂ ಆಗಿವೆ. ನಿಜವಾಗಿಯೂ ವಿಚಾರ ಮಾಡಿ ನೋಡಿದರೆ ಆಧ್ಯಾತ್ಮದ ಆಳವಾದ ಅಧ್ಯಯನದ, ಇಹ-ಪರ-ಲೌಕಿಕ ಜ್ಞಾನದ ಆಗರವೇ ಸಾಗರವೇ ತಾವಾದ ತ್ರಿಮೂರ್ತಿಗಳೂ ಸರ್ವಜ್ಞರೇ! ಒಬ್ಬರು ಹೆಚ್ಚು, ಒಬ್ಬರು ಕಡಿಮೆ ಎಂದು ಹೇಳಲಿಕ್ಕೆ ಬಾರದಂತಿರುವರು. ಅವರು ಇಹ-ಪರ ಲೋಕಗಳ ಉದ್ಧಾರಕರು! ನಮ್ಮಂತೆಯೇ ಮಾನವರಾಗಿ ಜನಿಸಿ ಭೂಲೋಕದಲ್ಲಿ ನಮ್ಮೊಂದಿಗಿದ್ದು ಇದ್ದೂ ಇಲ್ಲದಂತಿದ್ದು ಮಹಾಮಾನವರಾದವರು. ಅಂಥವರ ದಿವ್ಯಚರಿತ್ರೆಯನ್ನು, ಅವರು ನೀಡಿದ ದಿವ್ಯಾಮೃತದ ವಾಣಿಗಳನ್ನು ಸವಿಯುವಂತಹ ಭಾಗ್ಯವಾದರೂ ನಮಗಿದ್ದೆಯಲ್ಲಾ! ಅವರ ಪ್ರತಿಯೊಂದು ಮಾತೂ ನಮಗೆ ನೈವೇದ್ಯವಾಗಿದೆ, ಆಗಬೇಕು!

ಈ ಮೂವರೂ ತ್ರಿವಿಕ್ರಮನಂತೆ, ವಾಮನನಂತೆ ತಂತಮ್ಮ ನಾಡುಗಳನ್ನು ಸುತ್ತಿದವರು. ಮೂವರೂ ಜಾತಿ-ಮತ-ಪಂಥಗಳನ್ನು ಪರಿಗಣಿಸದೇ ಗುಣಕ್ಕೇ ಪ್ರಾಧಾನ್ಯವಿತ್ತವರು. ಗುಣಕ್ಕೆ ಮತ್ಸರವುಂಟೆ? ಎಂದು ಪ್ರಶ್ನಿಸಿದವರು, ನೀತಿಗೆ ಪಟ್ಟಗಟ್ಟಿದವರು, ಗೃಹ ಸಂಸಾರದಿಂದ ಪ್ರಾರಂಭಿಸಿ ವಿಶ್ವರಹಸ್ಯದವರೆಗೆ ಎಲ್ಲ ವಿಷಯಗಳ ಬಗೆಗೆ ಎಂದೆಂದಿಗೂ ಮರೆಯಲಾಗದಂತಹ ಸುವರ್ಣಸೂತ್ರಗಳನ್ನು ಹೇಳಿ ಅಮರರಾಗಿಹರು. ಸಾಮಾನ್ಯವಾಗಿ ಎಲ್ಲರೂ ಪಾಲಿಸಬೇಕಾದ ಮಾತುಗಳನ್ನು ತಂತಮ್ಮ ಕಾವ್ಯಕೃತಿಗಳಲ್ಲಿ ಎರಕ ಹೊಯ್ದಿದ್ದು, ಪೋಣಿಸಿದ್ದುದು ಹೀಗೆ-'ಹೃದಯ ಪರಿಶುದ್ಧಿ, ನೀತಿಯ ನೆಲೆಗಟ್ಟಿನ ಮೇಲೆ ನಿಂತ ಜೀವನ, ಮಾನವ-ಮಾನವರಲ್ಲಿ ಸಮದರ್ಶಿತ್ವದಾಚರಣೆ, ಎಲ್ಲರೊಡನೆ ವೈರ ತಾಳದೇ ಪ್ರೀತಿಯಿಂದ ಬದುಕುವುದು, ಸಕಲ ಜೀವಿಗಳಲ್ಲಿ ದಯೆ, ಕರುಣೆ ತೋರುವುದು, ಸರ್ವರೊಡನೆ ಮೈತ್ರಿ, ಎಲ್ಲ ಕಾರ್ಯಗಳಲ್ಲಿ ಅಹಿಂಸೆ ಪಾಲಿಸುವುದು. ಎಲ್ಲ ಕಾಲದಲ್ಲಿಯೂ ಸತ್ಯವನ್ನು ನುಡಿಯುವುದು, ಚಾರಿತ್ರ್ಯ ಶುದ್ಧಿಗೇ ಬೆಲೆ ಕೊಡುವುದು-ಇವು ಅವರು ಎತ್ತಿ ಹಿಡಿದ ಮಾನವೀಯ ಮೌಲ್ಯದ ತತ್ತ್ವಗಳು. ಈ ಮೂವರೂ ಅಚಾರ್ಯ ಪುರುಷರು, ಋಷಿ ಸದೃಶರು! ಮಾನವ ಕುಲದುದ್ಧಾರಕರು! ಅವರು ನಮ್ಮ ಭರತಭೂಮಿಯಲ್ಲಿ ಉದಿಸಿಬಂದುದೇ ಒಂದು ಭಾಗ್ಯ! ಅಂತಹ ಭಾಗ್ಯವಂತರ ನಾಡಿನಲ್ಲಿ ವಾಸಮಾಡಿರುವ ನಾವು-ನೀವುಗಳೆಲ್ಲ ಎತ್ತ ಹೊರಟಿದ್ದೇವೆ? ಏನು ಮಾಡುತ್ತಿದ್ದೇವೆಂದೆನಿಸುವುದಿಲ್ಲವೆ? ಇಂತಹ ಉದಾತ್ತ ಮಹಾನುಭಾವರು ಬಿತ್ತಿಹೋದ ತತ್ತ್ವಗಳನ್ನು ಮೆಲುಕು ಹಾಕುತ್ತಾ ಜೀವನ ಸದುಪಯೋಗ ಮಾಡಿಕೊಳ್ಳೋಣ!

ತಿರುವಳ್ಳುವರ್ ಕವಿಯ ಮಾತುಗಳು ಎಂಥ ಕಠಿಣ ಹೃದಯಿಯನ್ನು ಪರಿವರ್ತನೆ ಮಾಡುವಂತಹ ಶಕ್ತಿವರ್ಧಕಗಳಂತಿವೆ. ಅವರು ತಮ್ಮ ಪದ್ಯಗಳಲ್ಲಿ ಹೇಳಿದ್ದು ಹೀಗೆ-'ಎಲ್ಲ ಜೀವಿಗಳ ಬಗ್ಗೆ ಪ್ರೇಮ, ಎಲ್ಲ ಕೆಡುಕಿನಿಂದ ದೂರ ಇರುವಿಕೆ, ದಾನ, ಕ್ಷಮೆ, ಸತ್ಯಗಳೇ ಪುಣ್ಯಮಂದಿರದ ಪಂಚಸ್ತಂಭಗಳು ಎಂದು ಹೇಳಿದ್ದಾರೆ. ನಿಮಗೆ ಕೆಡುಕು ಮಾಡಿದವರಿಗೂ ನೀವು ಒಳಿತು ಮಾಡಿರಿ, ನಿಮಗೆ ಕೆಡುಕು ಮಾಡಿದವರಿಗೆ ಪ್ರತಿಯಾಗಿ ಒಳಿತನ್ನೇ ನೀವು ಮಾಡದಿದ್ದರೆ ನಿಮ್ಮ ಪರಿಪೂರ್ಣತ್ವವೆಂತು? ಒಳಿತು ಮಾಡುವುದನ್ನು ನೆನಪಿಡುವುದೇನೋ ಸರಿ, ಆದರೆ ಕೆಟ್ಟದ್ದು- ಮಾಡಿದ್ದುದನ್ನು ಮರೆಯಬೇಕಾದದ್ದೂ ಅಷ್ಟೇ ಅಗತ್ಯವಾದುದು' ಎಂದು ಬೋಧಿಸಿದ್ದಾರೆ-ಬುದ್ಧನಂತೆ! 'ಒಳ್ಳೆಯವನಾಗಿರು, ಒಳ್ಳೆಯದನ್ನೇ ಮಾಡು', ಇದು ಅವರ ಉಪದೇಶದ ತಿರುಳಾಗಿದೆ. ವೇಮನ-ಸರ್ವಜ್ಞರೂ ಇದನ್ನೇ ಎತ್ತಿ ಹಿಡಿದಿದ್ದಾರೆ. ನಾವಿಂದು ಇವರ ತತ್ತ್ವಗಳನ್ನೋದಿ ಆತ್ಮಾವಲೋಕನ ಮಾಡಿಕೊಂಡು ನಡೆಯಬೇಕಾಗಿದೆ. ದೇಶಕ್ಕೆ ಏಕಾಂಗವೀರನಾಗಿ ಹೋರಾಡಿ ಸ್ವಾತಂತ್ರ್ಯ ತಂದುಕೊಟ್ಟ ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿಯವರೂ ಸತ್ಯ-ಶಾಂತಿ-ಅಹಿಂಸಾ ಧರ್ಮದ ಪಾಲಕರಾಗಿದ್ದುಕೊಂಡು ಈ ತ್ರಿಮೂರ್ತಿಗಳಂತೆಯೇ ಜೀವನ ಸಾಗಿಸಿದವರು. ಹಾಗೆ ನೋಡಿದರೆ ಇವರಿಗಿಂತಲೂ ಮಿಗಿಲಾದವರು ಗಾಂಧೀಜಿ. ಅವರೆಂದ ಮಾತು 'ಯಾರಾದರೂ ಕೋಪದಿಂದ ಎಡಗೆನ್ನೆಗೆ ಹೊಡೆದರೆ ಬಲಗೆನ್ನೆಗೂ ಹೊಡೆಯಿರಿ ಎಂದುಕೊಡಿ' ಎಂದರಂತೆ. ಆ ರೀತಿಯಲ್ಲಿ ನಾವು ನಡೆದುಕೊಂಡರೆ ಮನಸ್ಸು ಪರಿವರ್ತನೆಯಾದೀತೆಂಬ ಅರ್ಥದಲ್ಲಿ ಮಹಾತ್ಮಾ ಗಾಂಧೀಜಿಯವರ ಮಾತಿನ ಶೈಲಿಯಿದು! ಬಲಗೆನ್ನೆ ನೀಡಿದ್ದಾನೆ ನಿಲ್ಲಿ ಎಂದು ಹೇಳಿ ಹೊಡೆಯುವಂತಹ





ಬಂಟರೂ ನಾವಾಗಿದ್ದೇವೆಯಿಂದು, ಉದಾತ್ತ ನೀತಿಯ ಮಾತುಗಳನ್ನು ಗಾಳಿಗೆ ತೂರುತ್ತಲಿದ್ದೇವೆ. ಇದು ಸರಿಯಾದ ಕ್ರಮವಲ್ಲ, ಬದುಕೂ ಅಲ್ಲ! ಇಂಥ ಪುಣ್ಯಪುರುಷರ ಚರಿತ್ರೆಗಳು, ಅವರ ಆದರ್ಶಗಳು ನಮ್ಮ ನಿತ್ಯ ಬದುಕಿನ ಉಸಿರಾಗಬೇಕು. ಆ ಕಾರಣದಿಂದ ಅಂಥವರ ಕಾವ್ಯಕೃತಿಗಳನ್ನು ಮೆಲುಕು ಹಾಕುವಂತಹ ವಿದ್ಯೆಯನ್ನಾದರೂ ಪ್ರತಿಯೊಬ್ಬ ಭಾರತೀಯ ಅಕ್ಷರಸ್ಥನಾಗಬೇಕು. ಪರಕೀಯರನ್ನು ಮೀರಿಸುವ ಪಣ ತೊಡಬೇಕು.

೨೦೦೦ ವರ್ಷಗಳ ಹಿಂದೆ ತಿರುವಳ್ಳುವರ್ ಮಹರ್ಷಿಯಿಂದ ರಚಿಸಲ್ಪಟ್ಟ ತಮಿಳು ಸಾಹಿತ್ಯದಲ್ಲಿ ಅಷ್ಟೇ ಏಕೆ ವಿಶ್ವಸಾಹಿತ್ಯದಲ್ಲಿಯೇ ಅತ್ಯಂತ ಶ್ರೇಷ್ಠ ಗ್ರಂಥ. ಇದು ದೇಶ, ಭಾಷೆ, ಜಾತಿ, ಮತ, ಪಂಥಗಳ ಎಲ್ಲೆಗಳನ್ನೆಲ್ಲಾ ದಾಟಿ ಮನುಕುಲದ, ಮಾನವ ಸಮಷ್ಟಿಯ ವೇದವಾಗಿ ಪ್ರಾಜ್ಞರಿಂದ ಪ್ರಶಂಸಿಸಲ್ಪಟ್ಟಿದೆ. ಈಗಾಗಲೇ ಹೇಳಿದಂತೆ ೧೩೩೦ ದ್ವಿಪದಿಗಳನ್ನೊಳಗೊಂಡು ಧರ್ಮ, ಅರ್ಥ, ಕಾಮ ಎಂದು ಮೂರು ಮುಖ್ಯ ಭಾಗಗಳಾಗಿ ವಿಂಗಡಿಸಲ್ಪಟ್ಟ ಈ ಕೃತಿಯು ಜಗತ್ತಿಗೆ ವಿಶ್ವಮಾನವ ತತ್ತ್ವವನ್ನು ಬೋಧಿಸಿ ವಿರಾಜಿಸುತ್ತಿದೆ. ತಮಿಳಿನ ಅತ್ಯಂತ ಪ್ರಾಚೀನ ಕೃತಿಯಾದ 'ತಿರುಕ್ಕುರುಳ್' ನೀತಿ ಬೋಧಕ ಕಾವ್ಯ. ಇದರಲ್ಲಿ ಪುರುಷಾರ್ಥತ್ರಯಗಳಲ್ಲಿ ಧರ್ಮ, ಅರ್ಥ, ಕಾಮ ಈ ಮೂರನ್ನು ಸರಿಯಾಗಿ ಪ್ರತಿಯೊಬ್ಬ ಮಾನವನು ಅನುಸರಿಸಬೇಕಾದ ಜೀವನ ಪಥವನ್ನು ನಿರ್ದೇಶಿಸಿದ್ದಾರೆ ಮಹರ್ಷಿ ತಿರುವಳ್ಳುವರ್! ಈ ಕೃತಿ ಏಳುಪದಗಳಿಂದಾದ ದ್ವಿಪದಿ. ಇದು ಬಹಳ ಚುಟುಕಾಗಿಯೂ, ಅರ್ಥ ಗಾಂಭೀರ್ಯವನ್ನೂ, ವಿಸ್ತಾರ ವನ್ನೂ ಹೊಂದಿರುವುದಾಗಿಯೂ ಮೊನಚಾದ ತಮಿಳಿನಲ್ಲಿ ರಚಿತವಾಗಿದೆಯಾದರೂ ಇತರ ಭಾರತೀಯ ಭಾಷೆಗಳಿಗೆ ಅನುವಾದವಾಗಿದೆ. ಕನ್ನಡದಲ್ಲಿ ಮೊದಲ ಬಾರಿಗೆ ಪದ್ಯದ ರೂಪದಲ್ಲಿ ಎಲ್ಲಾ ೧೩೩೦ ಕುರುಳುಗಳನ್ನೂ ಅನುವಾದಿಸಿ ಪ್ರಕಟಿಸಿದ ಕೀರ್ತಿ ಶ್ರೀ ನ. ಮುನಿಸ್ವಾಮಿಯವರಿಗೆ ಸಲ್ಲುತ್ತದೆ. ಇದರಿಂದ ಕನ್ನಡಿಗರಿಗೆ ಮಹದುಪಕಾರವಾಗಿದೆ.

ಈ ಕೃತಿಯ ಕರ್ತೃ ತಿರುವಳ್ಳುವರ್ ತಮಿಳಿನ ಆದಿಕವಿ, ದೇವಕವಿ, ಮಹಾವಾಗ್ಮಿ, ಮಹರ್ಷಿ, ತ್ರಿವರ್ಗ ಪ್ರವರ್ತಕ ಎಂಬಿತ್ಯಾದಿಯಾಗಿ ಕರೆದು ವಿದ್ವಾಂಸರನೇಕರು ಗೌರವ ಸಲ್ಲಿಸಿದ್ದಾರೆ. ದ್ವಿಪದ ಛಂದಸ್ಸಿನ ಕಿರುಗಾತ್ರದ ಈ ಕೃತಿ ಇಡೀ ಪ್ರಪಂಚದ ಉದ್ದಗಲವೂ ಹಬ್ಬಿದೆ. ಮಾನವೀಯತೆಯೇ ತಿರುವಳ್ಳುವರ್ ಅವರ ಮೂಲಭೂತ ಸಿದ್ಧಾಂತವಾದದ್ದರಿಂದ ಇವರ ಈ ಕೃತಿ ಆಸ್ತಿಕ ಮತ್ತು ನಾಸ್ತಿಕ ಬಾಂಧವರೆಲ್ಲರ ಹೃದಯವನ್ನು ಸೂರೆಗೊಂಡು ವಿಶ್ವಮಾನ್ಯ ಕೃತಿಯಾಗಿದೆ. ಶೈವ, ವೈಷ್ಣವ, ಜೈನ, ಬೌದ್ಧ, ಕ್ರೈಸ್ತ, ಇಸ್ಲಾಂ ಮತದವರು ತಮ್ಮ ಪವಿತ್ರ ವೇದ ಗ್ರಂಥಗಳಂತೆಯೇ ಈ ಕೃತಿಯನ್ನು ಬಹಳ ಭಕ್ತಿ, ಶ್ರದ್ಧೆಗಳಿಂದ ಪಠಣ ಮಾಡುತ್ತಾರೆ. ಹಾಗೆಯೇ ಈ ಮತಗಳ ಕಟ್ಟು-ಕಟ್ಟಳೆಗೊಳಗಾಗದೆ ಮಾನವೀಯ ಮೌಲ್ಯಗಳನ್ನೇ ತಮ್ಮ ಜೀವನದ ಧ್ಯೇಯ ಧೋರಣೆಗಳಾಗಿಸಿಕೊಂಡ ವಿಚಾರವಾದಿ ಪ್ರಾಜ್ಞ ವರ್ಗವೂ ಈ ಕೃತಿಯ ಉದಾತ್ತ ತತ್ತ್ವಗಳನ್ನು ಮೆಚ್ಚಿಕೊಂಡಿದೆ. ಲಿಯೋ ಟಾಲ್‌ಸ್ಟಾಯ್, ರಾಬರ್ಟ್ ಇಂಗರ್‌ಸಾಲ್, ಮಹಾತ್ಮಾ ಗಾಂಧೀಜಿ, ಆಚಾರ್ಯ ವಿನೋಬಾಭಾವೆ-ಮುಂತಾದವರು ಈ ಕೃತಿಯನ್ನು ಓದಿ ತಮ್ಮ ಭಾಷಣಗಳಲ್ಲಿ, ಲೇಖನಗಳಲ್ಲಿ ಬಳಸಿಕೊಳ್ಳುತ್ತಿದ್ದರಂತೆ. ತಿರುಕ್ಕುರುಳ್ ಕೃತಿಯು ಲ್ಯಾಟಿನ್, ಜರ್ಮನ್, ಫ್ರೆಂಚ್, ಡಚ್, ಫಿನ್ನಿಸ್, ಪೋಲಿಶ್, ರಶಿಯನ್, ಜೈನ್, ಫಿಜಿ, ಮಲಯ, ಬರ್ಮಾ ಈ ಮೊದಲಾದ ವಿದೇಶೀ ಭಾಷೆಗಳಲ್ಲಿಯೂ; ಸಂಸ್ಕೃತ, ಉರ್ದು, ಮರಾಠಿ, ಬಂಗಾಳಿ, ಹಿಂದಿ, ಕನ್ನಡ, ತೆಲುಗು, ಮಲಯಾಳಂ ಮುಂತಾದ ಭಾರತೀಯ ಭಾಷೆಗಳಲ್ಲಿಯೂ ಅನುವಾದಿಸಲ್ಪಟ್ಟಿದೆ. ಧರ್ಮಶಾಸ್ತ್ರ, ಅರ್ಥಶಾಸ್ತ್ರ, ಕಾಮಶಾಸ್ತ್ರ, ರಾಜ್ಯಶಾಸ್ತ್ರ, ಮನಶಾಸ್ತ್ರ, ಜೀವಶಾಸ್ತ್ರ, ಭೌತಶಾಸ್ತ್ರ, ನೀತಿಶಾಸ್ತ್ರ, ತತ್ತ್ವಶಾಸ್ತ್ರ ಮೊದಲಾದ ಜ್ಞಾನ ಶಾಖೆಗಳನ್ನೊಳಗೊಂಡ ವಿಶ್ವಕೋಶವೇ ಆಗಿದೆ ಈ ತಿರುಕ್ಕುರುಳ್ ಗ್ರಂಥವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದೆಂದಿದ್ದಾರೆ ವಿದ್ವಾಂಸರು. ಈ ಕಿರುಕೃತಿಯಲ್ಲಿ ಮಾನವನಿಗೆ ಬೇಕಾಗುವ ಜೀವನ ಮೌಲ್ಯಗಳನ್ನು ಹಿಡಿದಿಟ್ಟಿರುವ ಜಾಣ್ಮೆ, ಕವಿಯ ಕಾಣ್ಕೆಯನ್ನು ಯಾರಾದರೂ ಮೆಚ್ಚುವಂತಹದ್ದೇ!

ಹತ್ತು ದ್ವಿಪದಿಗಳಿಗೊಂದು ಅಧ್ಯಾಯವನ್ನಾಗಿ ಮಾಡಿ; ಅದಕ್ಕೆ ಶೀರ್ಷಿಕೆಯನ್ನಿಟ್ಟು ಬರೆದಿದ್ದಾನೆ. ಉದಾಹರಣೆಗಾಗಿ ದೇವರಸ್ತುತಿ, ಮಳೆಯ ಮಹಿಮೆ, ದೃಷ್ಟಾರರ ಹಿರಿಮೆ, ಜೀವನ ಸಂಗಾತಿಯ ಲಕ್ಷಣ, ಮಕ್ಕಳಭಾಗ್ಯ, ಒಲವು

ಹೊಂದಿರುವುದು, ಅತಿಥಿ ಸತ್ಕಾರ, ಸವಿನುಡಿಯನ್ನಾಡುವುದು, ಉಪಕಾರ ಸ್ಮರಣೆ, ಸಮದರ್ಶಿತ್ವ, ಆತ್ಮಸಂಯಮ, ಆಚಾರ, ಹೀಗೆ ತಲಾ ಹತ್ತು ದ್ವಿಪದಗಳಲ್ಲಿ ೧೩೩ ಅಧ್ಯಾಯಗಳಲ್ಲಿ ಮಾನವನಿಗೆ ಬೇಕಾಗುವಂತಹ ಜೀವನ ಮೌಲ್ಯಗಳನ್ನು ಹಿಡಿದಿಟ್ಟು ತಿಳಿಯಪಡಿಸಿದ್ದಾರೆ. ಒಟ್ಟು ಈ ಕೃತಿಯ ಅರ್ಥವಿವರಣೆಯು ಹೀಗಿದೆ:

**ತಿರುಕ್ಕುರುಳ್ ಕೃತಿಯ ಧ್ಯೇಯ:**

ಧರ್ಮ, ಅರ್ಥ, ಕಾಮ ಇವು ಮೂರು ತಿರುಕ್ಕುರುಳ್ ಕೃತಿಯ ಪ್ರಧಾನ ಭಾಗಗಳು. ಮಾನವ ಸಮಷ್ಟಿ ಜೀವನದ ಅಂಗತ್ರಯಗಳಾದ ಈ ವಿಭಾಗಗಳನ್ನು ಪುರುಷಾರ್ಥಗಳೆನ್ನುವರು ತಿಳಿದವರು. ವಿಶ್ವಸ್ಥ ವಿಕಾಸ ತತ್ತ್ವದ ಪ್ರಕ್ರಿಯೆಗೆ ಅನುಗುಣವಾಗಿ ಮೃಗತ್ವದಿಂದ ಬಿಡುಗಡೆ ಹೊಂದಿ ಮನಸ್ಸನ್ನು ಪಡೆದುಕೊಂಡ ವಿಶ್ವಮಾನವ ಕುಲದ ಪ್ರತಿಯೊಬ್ಬ ಮನುಷ್ಯನು ಈ ಪ್ರಪಂಚದಲ್ಲಿಯೇ ಸಾಧಿಸಬೇಕಾದ 'ಪರಮಾರ್ಥ' ಇವುಗಳೆಂದು ವೈಚಾರಿಕ ದೃಷ್ಟಿಯ ಸತ್ಯನಿಷ್ಠೆಯುಳ್ಳ ತಜ್ಞರ ಸ್ಪಷ್ಟವಾದ ಅಭಿಪ್ರಾಯ. ಮಾನವನು ತನ್ನ ಜೀವನಾನುಭವದಲ್ಲಿ ಮೊದಲನೆಯ ಪುರುಷಾರ್ಥ ಕಾಮ. 'ಕಾಮ' ಎಂದರೆ ಬಯಕೆ ಅಥವಾ ಸುಖಾನುಭವ ಎಂದರ್ಥ. ಈ ಸುಖಾನುಭವಕ್ಕೆ ಬೇಕಾದ ಮಾಧ್ಯಮವೇ ೨ನೆಯ ಪುರುಷಾರ್ಥವಾದ 'ಅರ್ಥ'. ಅರ್ಥವೆಂದರೆ ಬರಿಯ ಹಣವಲ್ಲ. ಪ್ರಕೃತಿಯ ಸಿರಿ ಸಂಪತ್ತುಗಳು ಮತ್ತು ಮಾನವನೇ ತನ್ನ ಸ್ವಪ್ರಯತ್ನದಿಂದ ಗಳಿಸಿದ ಧನಕನಕಾದಿಗಳು ಜ್ಞಾನ-ವಿಜ್ಞಾನಗಳ ಮೊತ್ತವೇ ಅರ್ಥ. ಈ ಕಾಮ, ಅರ್ಥಗಳ ಅನುಭವಗಳ ಹಿನ್ನಲೆಯ ಜೀವನದಲ್ಲಿ ತನ್ನ ಮನಶ್ಶಕ್ತಿಯಿಂದ ಕಂಡುಕೊಂಡ ಅರ್ಥವೇ ಮೂರನೆಯ ಪುರುಷಾರ್ಥವಾದ 'ಧರ್ಮ' ಎಂಬ ಈ ಶಬ್ದ ಪ್ರತಿಮೆ. ಪ್ರಕೃತಿನಿಯಮ, ಸಾಮಾಜಿಕ ವ್ಯವಸ್ಥೆ, ರಾಜ್ಯ ವ್ಯವಸ್ಥೆ ಈ ಮೊದಲಾದ ಅರ್ಥಗಳನ್ನು ಈ ಶಬ್ದ ಕುರಿತದ್ದಾಗಿದೆ. ಸ್ವಾರ್ಥಪರರ ಬದುಕನ್ನೇ ಸಾಗಿಸುತ್ತಿರುವ ಅಸುರೀ ಗುಣಗಳುಳ್ಳ ಮಾನವನು ತನ್ನ ಮೃಗೀಯ ಗುಣಗಳಿಂದ ಸಂಪೂರ್ಣ ಬಿಡುಗಡೆ ಹೊಂದಿ ತಾನು ಬೇರೆಯಲ್ಲ ಮತ್ತು ಸಮಾಜ ಬೇರೆಯಲ್ಲ ಎಂಬ ಸತ್ಯವನ್ನರಿತುಕೊಂಡು ಮಾನವ ಸಮಾಜದ ಕಲ್ಯಾಣಕ್ಕಾಗಿ ತನ್ನ ಜೀವನವನ್ನು ಅರ್ಪಿಸಿಕೊಂಡು ಕರ್ತವ್ಯಬದ್ಧನಾಗುವುದೇ ನಿಜವಾದ ಸುಖ. ಸುಖಗಳಲ್ಲಿ ಪರಮ ಸುಖವಿದೆ. ಇದುವೇ ತಿರುಕ್ಕುರುಳ್ ಕೃತಿಯ ಸಮಗ್ರ ಉದ್ದೇಶ ಮತ್ತು ತಿರುಳಾಗಿದೆ.

'ಮಳೆಯ ಮಹಿಮೆ'ಯಲ್ಲಿ ಕವಿವರ್ಯರು ಹೀಗೆಂದಿದ್ದಾರೆ-

*ಮಳೆಯಿಂದ ಇಳೆಯ ಬಾಳು ಸಾಗುತಿಹುದು*
*ಅದರಿಂದದನು ಅಮೃತವೆಂದೆನಿಸಲಹುದು* ॥೧॥

*ಮಳೆಯು ಮನುಜರಿಗೆ ಉಣಿಸುಗಳ ಬೆಳೆಸು ತರುವುದು*
*ಮತ್ತದು ಅವರಿಗೆ ತಾನೊಂದುಣಿಸಾಗುವುದು* ॥೨॥

*ಮಳೆಯು ತಾ ಹುಯ್ಯದೆ ಮನುಜ ಜೀವನವ ಕೆಡಿಸುವುದು*
*ಮತ್ತದು ಹುಯ್ದು ಅವರ ಜೀವನದ ಉದ್ಧರಿಸುವುದು* ॥೩॥

*ದಾನ-ತಪ ಇವೆರಡೂ ತಪ್ಪುವುದು ಈ ಜಗದಿ*
*ಮುಗಿಲು ತಾ ಮಳೆಯನು ಸುರಿಸದಿರಲು* ॥೪॥

*ಜಲವಿರದೆ ನಡೆಯದು ಜಗದ ಬಾಳು*
*ಮಳೆಯಿರದೆ ನೆಲಸಮ ಆಚಾರ* ॥೫॥

ನೋಡಿ ಈ ದ್ವಿಪದಿಗಳು ಎಷ್ಟೊಂದು ಪರಿಣಾಮಕಾರಿಯಲ್ಲವೇ! ಇದೇ ಅಧ್ಯಾಯದಲ್ಲಿ ಇನ್ನು ೫ ದ್ವಿಪದಿಗಳಿವೆ. ಉದಾಹರಣೆಗೆಂದು ಇವುಗಳನ್ನು ಕೊಟ್ಟೆನಷ್ಟೆ! ತಿರುಕ್ಕುರುಳ್ ಕಾವ್ಯವನ್ನು ಶಾಂತ ಮನಸ್ಸಿನಿಂದ, ಏಕಾಗ್ರಚಿತ್ತದಿಂದ ಸಮಗ್ರವಾಗಿ ಓದಿ ಅರ್ಥೈಸಿಕೊಂಡು ಆಚರಣೆಗೆ ತಂದರೆ ನಮ್ಮ ಬದುಕು ಅಪರಂಜಿಯಾಗುತ್ತದೆ. ಪರಿಶುದ್ಧ ಮನಸ್ಸಿಗೆ ಈ ಕೃತಿ ಮುದದ ಕದ ತೆರೆಯುತ್ತದೆ. ಜೀವನವನ್ನು ಹಸನುಗೊಳಿಸುತ್ತದೆ. ಓದುವುದಕ್ಕೂ-ಕೇಳುವುದಕ್ಕೂ ಸಮಯವಿಲ್ಲದಂತೆ. ನಾವು ಬೇರೆ ಬೇರೆ ಕಾರ್ಯಗಳಲ್ಲಿ ಮಗ್ನರಾದರೇನು ಹೇಳುವುದು? ದೇಶಕಾಲಾತೀತವಾದ ಈ ಗ್ರಂಥ ಮಾನವನ ಬದುಕಿಗೆ ಬೇಕಾಗುವ ದಿವ್ಯಔಷಧವಿದ್ದಂತಿದೆ. ಹೇಳಿ ಮಾಡಿಸಿದಂತಿದೆ. ಇಂಥ ಗ್ರಂಥಗಳನ್ನೋದಿದ ವಿನೋಬಾ ಅವರು, ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿಯವರು ತಿರುವಳ್ಳುವರ್ ಅಂತಾಗಲಿಲ್ಲವೆ? ಅದು ಕಾರಣ ಇಂಥ ಪುಣ್ಯ ಪುರುಷರು ಬಿತ್ತಿದ ತತ್ತ್ವಗಳನ್ನು ಸ್ವಲ್ಪ ಸ್ವಲ್ಪ ಓದಿ ಅರ್ಥೈಸಿಕೊಳ್ಳಲಿಕ್ಕಾದರೂ ಪ್ರಯತ್ನಿಸುವುದು ನಮ್ಮ ಧರ್ಮ! ಅನೇಕ ಧರ್ಮ ದ್ರಷ್ಟಾರರು ಬಯಸಿದ್ದುಮ ಇದನ್ನೇ! ಸಾರ್ಥಕ ಬದುಕಿಗೆ ತಿರುವಳ್ಳುವರ್, ಸರ್ವಜ್ಞ ವೇಮನರ ಅಣಿಮುತ್ತುಗಳು ಅಮೃತಸಮಾನ ವಾದವುಗಳು. ಅವುಗಳನ್ನು ಸವಿಯುವ ಮನಸ್ಸು ಮಾಡೋಣ!!

ಸ್ವಾನುಭವ ಸಾರ್ವಭೌಮ ಆಧ್ಯಾತ್ಮ ಚಕ್ರವರ್ತಿಗಳೆನಿಸಿದ ತಿರುವಳ್ಳುವರ್, ತೆಲುಗಿನ ವೇಮನ ಮತ್ತು ಕನ್ನಡದ ಸರ್ವಜ್ಞಕವಿಗಳು ತ್ರಿವೇಣಿ ಸಂಗಮದಂತಿದ್ದವರು. ಇವರು ಬ್ರಹ್ಮ, ವಿಷ್ಣು, ಮಹೇಶ್ವರರಂತೆ ತ್ರಿಮೂರ್ತಿಗಳೆಂದೇ ಕರೆಯಿಸಿಕೊಂಡವರು ಹಾಗೂ ತ್ರಿವರ್ಗ ಪ್ರವರ್ತಕರೆಂದು ಭೂಷಿತರಾದವರು. ಇವರದು ತನ್ನಂತೆಯೇ ಇತರರೆಂದೇ ಬಗೆದವರು. ನಾನು ಬೇರೆ ಇತರರು ಬೇರೆಯೆಂದು ಬಗೆದವರಲ್ಲ. ಸಕಲ ಮನುಜ ಕುಲದವರೆಲ್ಲರೂ ನನ್ನವರೆಂದೇ ಒಪ್ಪಿಕೊಂಡು-ಅಪ್ಪಿಕೊಂಡವರು. ಅಂತೆಯೇ ಅವರು ವಿಶ್ವಮಾನ್ಯ ಪೂಜಿತರಾದರು, ಮಹಾನುಭಾವರಾದರು, ಮಹಾಮಾನವರಾದರು. ಅಂಥ ಪುಣ್ಯವಂತರ ಜೀವನ ಸಾಧನೆಯನ್ನು ನಾವಿಂದು ಮೆಲುಕು ಹಾಕುವುದು ಅದರಂತೆ ನಡೆಯುವುದು ಹಿಂದೆಂದಿಗಿಂತಲೂ ಅಗತ್ಯವಿದೆ. ಏಕೆಂದರೆ ಧರ್ಮ-ಅಧರ್ಮದ ಹಾದಿ ಹಿಡಿದಿದೆ. ಅರ್ಥವು-ವ್ಯರ್ಥವಾಗಿ ಸೋರುತ್ತಿದೆ. ಪ್ರತಿಯೊಬ್ಬನ ಕಾಮನೆಯೂ ಅಡ್ಡ ದಾರಿ ಹಿಡಿಯುತ್ತಿದೆ. ಭ್ರಷ್ಟಾಚಾರವಂತೂ ಮುಗಿಲು ಮುಟ್ಟಿದೆ. ಅನ್ಯಾಯ, ಅತ್ಯಾಚಾರ, ಅನೀತಿ, ಅಸತ್ಯಗಳೇ ತಾಂಡವನೃತ್ಯವಾಡುತ್ತಲಿದೆ. ಅದು ನಿವಾರಣೆಯಾಗಬೇಕಾದರೆ ಇಂಥ ಪುಣ್ಯಪುರುಷರ ಚರಿತ್ರೆಗಳನ್ನೋದಿ ಜೀವನದ ಪಯಣದಲ್ಲಿ ಅಳವಡಿಸಿಕೊಳ್ಳುವಂತಾಗಬೇಕು. ಅಂದಾಗ ಭಾರತದೇಶದಲ್ಲಿ ಜನಿಸಿದ್ದುದು ಸಾರ್ಥಕವಾದೀತು!!

ತೆಲುಗಿನ ವೇಮನ ಮತ್ತು ಕನ್ನಡದ ಸರ್ವಜ್ಞನ ತಲಾ ಇನ್ನೂರು ವಚನಗಳನ್ನು 'ಮಂಕುತಿಮ್ಮನ ಕಗ್ಗ'ದ ಕರ್ತೃ ಡಿ.ವಿ. ಗುಂಡಪ್ಪನವರು ಇಂಗ್ಲೀಷಿನಲ್ಲಿ ಅನುವಾದಿಸಿದ್ದಾರೆಂಬ ಮಾಹಿತಿಯನ್ನು ತಿರುಕ್ಕುರುಳ್ ಗ್ರಂಥದ ಕನ್ನಡಕ್ಕೆ ಅನುವಾದಿಸಿದ ನ. ಮುನಿಸ್ವಾಮಿಯವರು ಉಲ್ಲೇಖಿಸಿದ್ದಾರೆ. ಆದರೆ ನಾನೇನು ಅವುಗಳನ್ನು ಗಮನಿಸಿಲ್ಲ. ಈಗಾಗಲೇ ತಿರುವಳ್ಳುವರ್ ಮಹರ್ಷಿಯ ಕೃತಿ-ಜೀವನ-ಸಾಧನೆಯ ಕುರಿತು ಸಂಕ್ಷಿಪ್ತದಲ್ಲಿ ವಿವರಿಸಲಾಗಿದೆ. ಈಗ ತೆಲುಗಿನ ಕವಿ ವೇಮನ ಯೋಗಿಯ ಬಗೆಗೆ ಸಮೀಕ್ಷಿಸಿ ಆನಂತರದಲ್ಲಿ ಕನ್ನಡದ ಕವಿ ಸರ್ವಜ್ಞನ ಕುರಿತಾಗಿ ಬಣ್ಣಿಸುವುದು ಆಗಿದೆ. ಈ ಪುಟ್ಟ ಲೇಖನದಲ್ಲಿ ಸಮಗ್ರ ಮಾಹಿತಿಯನ್ನು ಹಿಡಿದಿಡುವುದು ಪ್ರಯಾಸದ ಕೆಲಸವೇ ಸರಿ! ಆದರೂ ಪ್ರಯತ್ನಿಸುವುದು ಲೇಖಕನಾದವನ ಕರ್ತವ್ಯವಾಗಿದೆ.

❖

## ಬಸವ ವಚನಾಮೃತ

*ಮಡಕೆಯ ಮಾಡುವಡೆ ಮಣ್ಣೇ ಮೊದಲು*
*ತೊಡಿಗೆಯ ಮಾಡುವಡೆ ಹೊನ್ನೇ ಮೊದಲು*
*ಶಿವಪಥವನರಿವಡೆ ಗುರುಪಥವೇ ಮೊದಲು*
*ಕೂಡಲಸಂಗಮದೇವನರಿವಡೆ*
*ಶರಣರ ಸಂಗವೇ ಮೊದಲು*

ಮಣ್ಣಿಲ್ಲದೆ ಮಡಕೆಯಾಗುವುದಿಲ್ಲ. ಹೊನ್ನಿಲ್ಲದೆ ಒಡವೆಯಾಗುವುದಿಲ್ಲ. ಕುಂಬಾರನಿಗೆ ಮಡಕೆ ಮಾಡುವ ಕೈಚಳಕ ಕಲ್ಪನೆ ತಿಗುರಿ ಎಲ್ಲ ಇರಬಹುದು-ಆದರೆ ಅವನಿಂದ ಆ ಮಡಕೆ ಅವನ ಕಲ್ಪನೆಯ ಪ್ರಕಾರ ಆಕಾರ ಪಡೆಯಬೇಕಾದರೆ ಆ ಎಲ್ಲಕ್ಕೂ ಮೂಲವಾಗಿ ಮಣ್ಣು ಬೇಕು. ಅಕ್ಕಸಾಲಿಗೂ ಅಷ್ಟೇ-ಅವನ ಬಳಿ ಅಗ್ಗಿಷ್ಟಿಕೆ ಚಿಮ್ಮಟ ಉಳಿ ಸುತ್ತಿಗೆ ಎಲ್ಲವೂ ಇರಬಹುದು-ಅಷ್ಟರಿಂದಲೇ ಅವನು ಬೇಕಾದ ಒಡವೆಯನ್ನು ಮಾಡಲಾರ-ಮಾಡಲು ಮೂಲವಾಗಿ ಚಿನ್ನ ಬೇಕು. ಮಣ್ಣಿದ್ದರೆ ಅದನ್ನು ಕುಂಬಾರನು ಶೋಧಿಸಿ ನೆನೆಸಿ ಮೃದು ಮಾಡಿಕೊಂಡು, ಚಿನ್ನವಿದ್ದರೆ ಅದನ್ನು ಅಕ್ಕಸಾಲೆಯು ಕಾಸಿ ಕಾಳಿಕೆಯನ್ನು ಕಳೆದು ಹದ ಮಾಡಿಕೊಂಡು ತಂತಮ್ಮ ಶಕ್ತಿ ಸಾಮರ್ಥ್ಯಕ್ಕನುಸಾರವಾಗಿ ಕಲಾಕೌಶಲವನ್ನು ಪ್ರಕಟಪಡಿಸಲು ಇಂಬಾಗುವುದು.

ಹಾಗೆಯೇ ಜೀವವೊಂದು ಈ ಲೋಕದಲ್ಲಿ ಚಂದವಾದ ಆಕಾರ ಪಡೆದು, ಜನರ ಸೇವೆಯಲ್ಲಿ ಸಂದು ಸಾರ್ಥಕ್ಯ ಪಡೆಯಬೇಕಾದರೆ-ಅದು ಸದ್ಗುರುವೊಬ್ಬನ ಕರುಣಾಕಟಾಕ್ಷದ ತನಿಹನಿಯಲ್ಲಿ ನೆಂದು, ಅವನ ಚರಣಾಘಾತಕ್ಕೆ ಸಿಕ್ಕಿ ಮಿದುವಾಗಿ, ಅವನ ಅಭಯಹಸ್ತದಲ್ಲಿ ಉಚಿತಾಕಾರ ಪಡೆದು ಅಂತರಂಗ ತಪೋsಗ್ನಿಯಲ್ಲಿ ಘಟ್ಟಿಗೊಳ್ಳಬೇಕು.

ಶಿಬಿರದಿಂದ ರಣರಂಗಕ್ಕೆ ಮುನ್ನುಗ್ಗುವ ವೀರನು ವಜ್ರಕಾಯನಾಗಿರಬೇಕಾಗಿರುವಂತೆ-ಶಿವಜ್ಞಾನವನ್ನು ಪಡೆಯುವೆನೆಂಬ ಯಾವ ಜೀವನಾಗಲಿ ಗುರುಸಾನ್ನಿಧ್ಯದಲ್ಲಿ ಆತ್ಮಶಕ್ತಿಯನ್ನು ಪಡೆದಿರಬೇಕು. ಹೀಗೆ ಆತ್ಮಶಕ್ತಿಯನ್ನು ಪಡೆಯಲನುವಾಗುವ ಗುರುಸಾನ್ನಿಧ್ಯವು ದೊರೆಯುವುದು ಹೇಗೆಂದು ಚಿಂತಿಸಬೇಡ-ಸಜ್ಜನರ ಸಹವಾಸದಲ್ಲಿರು ಸಾಕು ಎಂದು ಬಸವಣ್ಣನವರು ಅಪ್ಪಣೆ ಕೊಡಿಸಿರುವರು.

-ಡಾ|| ಎಲ್. ಬಸವರಾಜು
ಮೈಸೂರು

# ನೈತಿಕ ಶಿಕ್ಷಣ

ಕವಿತಾಕೃಷ್ಣ *

ರಾಷ್ಟ್ರೀಯ ಶಿಕ್ಷಣ ನೀತಿಯು 'ಸರ್ವರಿಗೂ ವಿದ್ಯಾಭ್ಯಾಸಕ್ಕೂ ಸಮಾನ ಅವಕಾಶವನ್ನು ಕಲ್ಪಿಸಿದಂತೆಯೇ ವಿದ್ಯಾರ್ಥಿಗಳ ನೀತಿ ನಡತೆಗಳ ಬೆಳವಣಿಗೆಗೂ ಸಹ ಅವಕಾಶವನ್ನು ಕಲ್ಪಿಸಿದೆ. ಇದೊಂದು ಗಮನಾರ್ಹವಾದ ಸಂಗತಿ. ಭಾರತೀಯ ಪೌರನಿಗೆ ಕೇವಲ ಕಲಿಯುವ ಸದಾವಕಾಶ ಕಲ್ಪಿಸಿದರೆ ಸಾಲದು. ಆತನ ನೀತಿಯುತವಾದ ನಡೆ-ನುಡಿ-ವ್ಯವಹಾರಗಳು ಸಂಸ್ಕಾರಗೊಂಡು ಬದುಕು ಸುಂದರವಾಗ ಬೇಕೆಂಬುದೇ ಅದರ ಆಶಯ. ದಿಟ, ಕಲಿಯುವವನ ಬದುಕು ಸುಂದರವಾದರೆ ಅವನ ಶಾಲೆ, ನೆರೆ ಹೊರೆ ಸುಂದರವಾಗುತ್ತದೆ. ಹಾಗೆಯೇ ಅವನ ಊರು ಜಿಲ್ಲೆ, ರಾಜ್ಯ ರಾಷ್ಟ್ರಾದಿಗಳೂ ಸಹ ಸುಂದರವಾಗ ಬಲ್ಲವು. ಈ ಅಂಶವನ್ನು ನಮ್ಮ ಪ್ರಾಚೀನ ಧರ್ಮವೂ ಸಹ ಮನಗೊಂಡಿರುವುದನ್ನು ಕಾಣಬಹುದು:

*'ನಮ್ಮನ್ನು ಕತ್ತಲಿನಿಂದ ಬೆಳಕಿನೆಡೆಗೆ ನಡೆಸು*
*ಹಾಗೆಯೇ ಅಸತ್ತಿನಿಂದ ಸತ್ತಿನೆಡೆದೆ ನಡೆಸು*
*ಮೃತ್ಯುಮುಖದಿಂದ ಅಮೃತತ್ವದೆಡೆಗೆ ನಡೆಸು'*

ಇದು ಎಂತಹ ಪ್ರಾರ್ಥನೆ. ಮಾನವನ ಬದುಕು ಶಿವಮುಖ ವಾಗಿ ನಡೆಯಲು ಎಷ್ಟು ಆಸೆಪಟ್ಟಿದ್ದಾರೆ ಅಲ್ಲವೆ?

ಪ್ರಾಚೀನ ಕಾಲದಿಂದಲೂ ಸಹ 'ನೀತಿ ಶಿಕ್ಷಣ'ವು ಧರ್ಮದ ಹಿಡಿತದಲ್ಲಿತ್ತು. ಆದರೆ ಅದು ಇಂದು ವ್ಯಾಪಕ ವಾದ ಅರ್ಥವನ್ನು ಹೊಂದಿರುವ ಶಿಕ್ಷಣದ ಹಿಡಿತದಲ್ಲಿದೆ. ಅದನ್ನು ಮನಗಂಡ ರಾಷ್ಟ್ರೀಯ ಶಿಕ್ಷಣವು ನೀತಿ ಶಿಕ್ಷಣಕ್ಕೆ ತುಂಬಾ ಮಹತ್ವ ನೀಡಿದೆ. ಕಲಿಯುವವನ ಚಾರಿತ್ರ್ಯ ನಿರ್ಮಾಣ ಮಾಡುವಲ್ಲಿ ಇದು ಅತಿ ಅವಶ್ಯವಾಗಿದೆ. ವ್ಯಕ್ತಿಯ ಸರ್ವಾಂಗೀಣ ಪ್ರಗತಿಯನ್ನು ಸಾಧಿಸುವುದೇ ಇಂದಿನ ಶಿಕ್ಷಣದ ಪ್ರಮುಖ ಉದ್ದೇಶವಾಗಿದೆ. ವ್ಯಕ್ತಿಯ ಏಳ್ಗೆಯಲ್ಲೇ ಸಮಾಜದ ಹಾಗೂ ರಾಷ್ಟ್ರದ ಉದ್ಧಾರವಡಗಿದೆ ಎಂಬ ಮಾತು ಸತ್ಯಸ್ಯ ಸತ್ಯವಾಗಿದೆ.

**ನೈತಿಕ ಶಿಕ್ಷಣದ ಮಹತ್ವ:**

ವಿದ್ಯಾರ್ಥಿಗಳಿಗೆ ಕೇವಲ ಓದು-ಬರಹ-ಲೆಕ್ಕಾಚಾರ ಗಳನ್ನಷ್ಟೇ ಕಲಿಸುವುದಾಗಲಿ, ಶಿಕ್ಷಣದ ಹೆಸರಿನಲ್ಲಿ ಜ್ಞಾನ-ಕೌಶಲಗಳನ್ನು ಕಲಿಸುವುದಾಗಲಿ ರಾಷ್ಟ್ರೀಯ ಶಿಕ್ಷಣದ ಉದ್ದೇಶವಲ್ಲ. ಅದು ವ್ಯಕ್ತಿಯಲ್ಲಿ ನಾಗರಿಕ ಸಲ್ಲಕ್ಷಣಗಳನ್ನು, ಅಗತ್ಯವಾದ ಸಚ್ಚಾರಿತ್ರ್ಯವನ್ನೂ, ವಿಶ್ವಭ್ರಾತೃತ್ವವನ್ನೂ, ರಾಷ್ಟ್ರೀಯ ಭಾವೈಕ್ಯತೆಯನ್ನು ಬೆಳೆಸಲು ಉದ್ದೇಶಿಸಿದೆ. ಕಲಿತ ವ್ಯಕ್ತಿಯನ್ನು ಸಮಾಜದ ಒಂದು ಅಮೂಲ್ಯ ಆಸ್ತಿಯನ್ನಾಗಿ ರೂಪಿಸಲು ಬಯಸಿದೆ. ಅದಕ್ಕಾಗಿ 'ನೈತಿಕ ಶಿಕ್ಷಣ' ವಿದ್ಯಾರ್ಥಿಗೆ ಅತ್ಯಗತ್ಯವಾಗಿ ಬೇಕಾಗಿದೆ.

ಸಾಮಾಜಿಕ ಪ್ರಗತಿಯು ಕೇವಲ ವೈಚಾರಿಕತೆ ಮತ್ತು ವೈಜ್ಞಾನಿಕತೆಯಿಂದ ಎಂಬ ಮಾತು ಒಂದು ಅರ್ಥದಲ್ಲಿ ಸತ್ಯವೆನಿಸಿದರೂ ಅದು ಪೂರ್ಣ ಸತ್ಯವಲ್ಲ. ಈ ಮಾತಿನ ಅಂತಃಸತ್ವವನ್ನು ಅರಿಯದ ನಾವಿಂದು ಸಾಕಷ್ಟು ಕಹಿಯನ್ನು ಉಣ್ಣುತ್ತಿದ್ದೇವೆ. ವೈಜ್ಞಾನಿಕ ಲಾಭಗಳನ್ನು ಸ್ವಾರ್ಥಿಗಳಾಗಿ ಮನುಕುಲದ ವಿನಾಶಕ್ಕೆ ಬಳಸುತ್ತಿದ್ದೇವೆ. ಸ್ವಾರ್ಥದಾಹ ಅತಿಯಾಗಿ ವಿಶ್ವಪೀಡಕರಾಗಿದ್ದೇವೆ. ಸಮಾಜಘಾತುಕ ಕಾರ್ಯಗಳು ದಿನನಿತ್ಯ ನಡೆಯಲಾರಂಭಿಸಿವೆ. ಮಾನವ ದಾನವನಾಗಿ ಪ್ರಾಣಗಳನ್ನು ತೆಗೆಯುತ್ತಿದ್ದಾನೆ. ಹಿಂದುಳಿದವರ ಶೋಷಣೆ ಮಾಡುತ್ತಿದ್ದಾನೆ. ಅಹಂಕಾರ ಅತಿಯಾಗಿ ವಿಚ್ಛಿದ್ರಕಾರಿ ಶಕ್ತಿಯಾಗಿ ಮನುಕುಲಕ್ಕೆ ಮಾರಕವಾಗುತ್ತಿದ್ದಾನೆ. ಹೀಗಿರುವಾಗ ನಾವು ಕೆಲವೇ ದಿನಗಳಲ್ಲಿ ಬೆಳಕಿನಿಂದ ಮತ್ತೆ ಕತ್ತಲಿನೆಡೆಗೆ, ಅಮೃತತ್ವದಿಂದ ಮೃತ್ಯುವಿನೆಡೆಗೆ, ಮಾನವತ್ವದಿಂದ ದಾನವತ್ವದೆಡೆಗೆ ಸಾಗುವುದಂತೂ ಸತ್ಯ. ಹೀಗಿರುವಾಗ ನಮ್ಮ ಉದ್ಧಾರ ನೈತಿಕ, ಆಧ್ಯಾತ್ಮಿಕ ಕ್ರಾಂತಿಯಿಂದ ಮಾತ್ರ ಸಾಧ್ಯ.

ವಿಶಾಲವಾದ ಅರ್ಥದಿಂದ ರೂಪುಗೊಂಡಿರುವ

* ಚಂದ್ರಮೌಳೇಶ್ವರ ಬಡಾವಣೆ, ಕ್ಯಾತ್ಸಂದ್ರ, ತುಮಕೂರು-೫೭೨ ೧೦೪.





'ನೈತಿಕ ಶಿಕ್ಷಣ' ಎಂಬ ಪಾರಿಭಾಷಿಕ ಶಬ್ದಕ್ಕೆ 'ಮೌಲ್ಯಶಿಕ್ಷಣ' ಎಂಬ ಮತ್ತೊಂದು ಹೆಸರನ್ನು ಪರ್ಯಾಯವಾಗಿ ಹೇಳಬಹುದು. ನೈತಿಕ ಅಥವಾ ಮೌಲ್ಯಶಿಕ್ಷಣದಿಂದ ಮಾನವ ದೇವಮಾನವನಾಗಬಲ್ಲ. ಈ ಧರೆಯನ್ನೇ ಸ್ವರ್ಗವನ್ನಾಗಿಸಬಲ್ಲ.

ಮಾನವ ಮೂಲತಃ ತುಂಬಾ ಸ್ವಾರ್ಥಿ. ಮೃಗೀಯ ಭಾವನೆಗಳಿಂದ ತುಂಬಿರುವ ಮಾನವ ಪ್ರಾಣಿಯೆ ಸರಿ. ಅಸೂಯೆ-ಕುಟಿಲತೆ-ದುರಾಸೆಗಳು ಮನದ ತುಂಬಾ ಮನೆ ಮಾಡಿವೆ. ಶಿಕ್ಷಣ ಈ ದೋಷಗಳನ್ನು ಸಂಪೂರ್ಣವಾಗಿ ವಾಸಿಮಾಡಲಾರದು. ಹಾಗೆಯೇ ವೈಚಾರಿಕತೆ ಮತ್ತು ವೈಜ್ಞಾನಿಕತೆಗಳೂ ಕೂಡ ನಿರ್ಮೂಲ ಮಾಡಲಾರವು. ಮಾಡುವಂತಿದ್ದರೆ ಇಂದಿನ ವಿದ್ಯಾವಂತರೆಲ್ಲರೂ ಆದರ್ಶ ಜೀವಿಗಳೇ ಆಗಿರಬೇಕಾಗಿತ್ತು. ಆದರೆ ಅದಕ್ಕೆ ಬದಲಾಗಿ ಇಂದು ಸಮಾಜದಲ್ಲಿ ಅನಾಚಾರ-ಭ್ರಷ್ಟಾಚಾರ-ಕೊಲೆ-ಸುಲಿಗೆ-ದರೋಡೆ-ಮೋಸ-ಅನ್ಯಾಯ-ಶೋಷಣೆಗಳು ಇಮ್ಮಡಿಯಾಗಿವೆ, ನಾಲ್ಮಡಿಯಾಗಿವೆ ಗುರು-ಶಿಷ್ಯರು, ತಂದೆ- ಮಕ್ಕಳು, ಗಂಡ-ಹೆಂಡಿರು, ತಾಯಿ-ಮಕ್ಕಳು, ರಾಷ್ಟ್ರ-ಪ್ರಜೆಗಳ ನಡುವಣ ಬಾಂಧವ್ಯದ ಕೊಂಡಿ ಮುರಿದಿದೆ. ಪ್ರೀತಿ-ಪ್ರೇಮ-ವಾತ್ಸಲ್ಯ ತ್ಯಾಗಕ್ಕೆ ಬದಲಾಗಿ ದ್ವೇಷಾಸೂಯೆಗಳೆ ತಾಂಡವವಾಡುತ್ತಿವೆ. ಈ ಪಿಡುಗಿಗೆ 'ನೀತಿಶಿಕ್ಷಣ'ವೊಂದೆ ಪರಿಹಾರ.

'ನೀತಿ ಶಿಕ್ಷಣವು' ಮಾನವರಲ್ಲಿ ಒಳಗಣ್ಣು ತೆರೆಸುತ್ತದೆ. ಸ್ವಚ್ಛಂಧ ವ್ಯಾಪಾರ ನಡೆಸುತ್ತದೆ. ಒಳ್ಳೆಯದು-ಕೆಟ್ಟದರ ಅರಿವು ಮಾಡಿಕೊಡುತ್ತದೆ. ಮುಖ್ಯವಾಗಿ ಸರ್ವೋದಯದ ಮೂಲತತ್ವವಾದ 'ಪ್ರೇಮ'ವು ಪುಟಕಿಟ್ಟು 'ಶಾಂತಿ'ಯನ್ನು ನೀಡುತ್ತದೆ. 'ಓದಿ ಬ್ರಾಹ್ಮಣನಾಗು, ತೂಗಿ ವೈಶ್ಯನಾಗು, ಕಾದು ಕ್ಷತ್ರಿಯನಾಗು, ಗೈದು ಶೂದ್ರನಾಗು ನೀನು ಏನಾದರಾಗು ಮೊದಲು ಮಾನವನಾಗು' ಎಂಬ ಕವಿವಾಣಿ ಓದುವ ಬ್ರಾಹ್ಮಣನಿಗಿನ್ನ ಕಾದುವ ಕ್ಷತ್ರಿಯನಿಗಿನ್ನ ತೂಗುವ ವೈಶ್ಯನಿಗಿನ್ನ, ದುಡಿಯುವ ಶೂದ್ರನಿಗಿನ್ನ, ಮಾನವನೇ ದೊಡ್ಡವನು; ಮಾನವತೆಯೇ ದೊಡ್ಡದು ಎಂದು ಸಾರುತ್ತಿದೆ. ಮೊದಲು ನಾವು ಮಾನವರಾಗ ಬೇಕಾದರೆ 'ನೀತಿ ಶಿಕ್ಷಣ; ಅತ್ಯಗತ್ಯ. ನೀತಿ ಶಿಕ್ಷಣ ಇಲ್ಲದ ಶಿಕ್ಷಣ ಪರಿಮಳವಿಲ್ಲದ ಹೂವಿನಂತೆ. ಹೂವಿಗೆ ಕಂಪೂ ಮುಖ್ಯ, ಸೊಂಪೂ ಮುಖ್ಯ. ನೈತಿಕ ಶಿಕ್ಷಣವು ಶಿಕ್ಷಣದ ಬುನಾದಿಯಾಗಬೇಕು.

**ನೈತಿಕ ಶಿಕ್ಷಣ ಯಾವಾಗ ಯುಕ್ತ?**

ಮಾನವನಿಗೆ ಬಾಲ್ಯ-ಯೌವ್ವನ-ಕೌಮಾರ್ಯ-ವೃದ್ಧಾಪ್ಯ ಎಂಬ ನಾಲ್ಕು ಅವಸ್ಥೆಗಳಿವೆ. ಅವನು ನೈತಿಕ ಶಿಕ್ಷಣವನ್ನಾಗಲಿ ಉಳಿದ ಶಿಕ್ಷಣವನ್ನಾಗಲಿ ಕಲಿಯಲು ಚಿಕ್ಕವಯಸ್ಸೇ ಉಚಿತವಾದುದು. ಪ್ರಾಚೀನರು 'ಚಿಕ್ಕಂದಿನ ವಿದ್ಯೆ ಪೊರೆಗು ಚೂಡಾರತ್ನ' ಎಂದಿದ್ದಾರೆ. ಜಾನಪದರು 'ಗಿಡದಲ್ಲಿ ಬಗ್ಗದು ಮರವಾಗಿ ಬಗ್ಗೀತೇ' ಎಂದು ಪ್ರಶ್ನಿಸಿದ್ದಾರೆ. ಇದನ್ನರಿತು ಮನೋವಿಜ್ಞಾನಿಗಳೂ, ಶಿಕ್ಷಣತಜ್ಞರು ಪ್ರಾಥಮಿಕ ಹಂತದಿಂದ ಹಿಡಿದು ಪದವಿ ಪೂರ್ವ ಕಾಲೇಜಿನ ವ್ಯಾಸಂಗದ ತನಕ 'ನೈತಿಕ ಶಿಕ್ಷಣ' ನೀಡಲು ಉತ್ತಮ ಕಾಲ ಎಂದಿದ್ದಾರೆ. ಪ್ರಾಥಮಿಕ ವಿದ್ಯಾಭ್ಯಾಸ ಕಾಲದಲ್ಲಿ ದೇಶಭಕ್ತಿಯೊಂದಿಗೆ ರಾಷ್ಟ್ರೀಯ ಭಾವೈಕ್ಯತೆಯನ್ನು ಮೂಡಿಸಲು ಒಂದು ಪರ್ವ ಕಾಲ. ಈ ಕಾಲದಲ್ಲಿ ನಮ್ಮ ಸಂಸ್ಕೃತಿಯ ಬಗೆಗೆ, ಪರಿಸರದ ಬಗೆಗೆ, ಕರ್ತವ್ಯ ನಿರ್ವಹಣೆ ಬಗೆಗೆ ಹೆಚ್ಚು ತಿಳಿವು ಮೂಡಿಸಲು ಸಾಧ್ಯ.

ಪ್ರೌಢಶಾಲಾ ಹಂತದಲ್ಲಿ ಸನ್ಮಾರ್ಗದಲ್ಲಿ ಒಲವು ಮೂಡಿಸಿದಂತೆ, ಭ್ರಷ್ಟಾಚಾರ-ಅನಾಚಾರ-ಅಪ್ರಮಾಣಿಕತೆಗಳ ಬಗ್ಗೆ ತಿರಸ್ಕಾರ ಭಾವನೆಯನ್ನು ಮೂಡಿಸಬೇಕು. ಜಾತಿ-ಕುಲ-ಗೋತ್ರ-ಧರ್ಮ-ಲಿಂಗಾದಿಗಳ ಮೇಲಿನ ಪೂರ್ವಗ್ರಹಪೀಡೆ ದೂಡಬೇಕು. ದುಶ್ಚಟಗಳ ಬಗ್ಗೆ ಎಚ್ಚರಿಕೆ, ವಿಶ್ವಭ್ರಾತೃತ್ವ, ವೈಜ್ಞಾನಿಕ ಮನೋಭಾವ ಮೂಡಿಸಲು ಸಾಧ್ಯ.

ಮಗುವು ಮನೆ, ನೆರೆ-ಹೊರೆ-ಶಾಲೆ ಸಮಾಜಗಳಿಂದ ಪ್ರಭಾವಿತವಾಗುವುದು ಸತ್ಯ ಸಂಗತಿ. ಅನುಕರಣೆಯಿಂದಲೇ ಅದರ ಕಲಿಕೆ ಮುನ್ನಡೆ ಸಾಧಿಸುವುದು. ಹೀಗಾಗಿ ಮಗುವಿಗೆ ನೈತಿಕ ಶಿಕ್ಷಣವು ಮೊದಲು ಮನೆಯಲ್ಲಿ ದೊರಯಬೇಕು. ಮನೆಯೇ ಮೊದಲ ಪಾಠಶಾಲೆ. ಜನನಿಯೇ ಮೊದಲ ಗುರುವು. ಇಲ್ಲಿ ಉತ್ತಮ ನೀತಿಯನ್ನು ಸಂಪಾದಿಸಿದವರು ಧನ್ಯರು, ಆದರೆ ಎಲ್ಲರಿಗೂ ಮನೆಯಲ್ಲಿ ಸರಿಯಾದ ಶಿಕ್ಷಣ ದೊರಕದು, ಇನ್ನು ನೆರೆ-ಹೊರೆಯಿಂದಲೂ ಅಷ್ಟೇ ಅದು ಮಗುವಿಗೆ ಹೊರೆಯಾಗಿರುವುದೇ ಹೆಚ್ಚು. ಇನ್ನು ಸಮಾಜವೋ ಹೇಳತೀರದು. ಆದರೆ ಕಲಿಯುವ ಮಗು ಎಲ್ಲರಿಗಿನ್ನ ಶಾಲೆಯಲ್ಲೇ ಅಧಿಕಾ ಕಾಲ

ವಿರುವುದು ಒಂದು ಸುಯೋಗ. ಆ ಶಾಲೆಯಲ್ಲಿ ಉತ್ತಮ ನೈತಿಕ ಶಿಕ್ಷಣ ದೊರಕಿದರೆ ಆತನ ಬದುಕು ಬಂಗಾರವಾಗಬೇಕು. ಇನ್ನು ಶಿಕ್ಷಕ ವಿದ್ಯಾರ್ಥಿಯ ಪಾಲಿಗೆ ಬ್ರಹ್ಮನಾದರೆ ಸಾಲದು 'ಸಾಕ್ಷಾತ್ ಪರಬ್ರಹ್ಮ'ನಾಗಬೇಕು.

**'ನೈತಿಕ ಶಿಕ್ಷಣ ಬೋಧನಾ ರೀತಿ'**

ಭಾರತ ದೇಶವು ಒಂದು ವೈಶಿಷ್ಟ್ಯಪೂರ್ಣವಾದ ದೇಶ. ಅಸಂಖ್ಯಾತ ಜಾತಿ-ಧರ್ಮ-ಭಾಷೆಗಳಿದ್ದರೂ ಸಹ ಇದೊಂದು ಜಾತ್ಯಾತೀತ ರಾಷ್ಟ್ರ. ಪ್ರಜೆಗಳೇ ಪ್ರಭುಗಳೆನ್ನುವ 'ಪ್ರಜಾಪ್ರಭುತ್ವ' ಇಲ್ಲಿದೆ. ಇಲ್ಲಿ ಯಾರೂ ಮುಖ್ಯರಲ್ಲ; ಯಾರೂ ಅಮುಖ್ಯರಲ್ಲ. ಎಲ್ಲರೂ ಸಮಾನರು. ಆದಾಗ್ಯೂ ನಮ್ಮ ಭಾರತ ಹಲವಾರು ಪ್ರಾಚೀನ ಮೌಲ್ಯಗಳನ್ನು ಪ್ರತಿಬಿಂಬಿಸಿದೆ.

ಸತ್ಯ: ಗೋವಿನ ಕಥೆಯಲ್ಲಿ 'ಸತ್ಯವೇ ನಮ್ಮ ತಾಯಿ ತಂದೆ, ಸತ್ಯವೇ ನಮ್ಮ ಬಂಧು ಬಳಗ, ಸತ್ಯವಾಕ್ಯಕ್ಕೆ ತಪ್ಪಿ ನಡೆದರೆ ಮೆಚ್ಚನಾ ಪರಮಾತ್ಮನು' ಎಂದು ಹೇಳಿದೆ. ಗಾಂಧೀಜಿ ಸತ್ಯಕ್ಕೆ ತುಂಬಾ ಮನ್ನಣೆ ನೀಡಿದ್ದರು.

ಅಹಿಂಸೆ: 'ಅಹಿಂಸೋ ಪರಮೋ ಧರ್ಮಃ' ಎಂದು ಪುರಾತನವಾಣಿ ಅಹಿಂಸೆಯನ್ನು ಪ್ರತಿಪಾದಿಸಿದೆ. ಮಹಾವೀರ ಬುದ್ಧ, ಬಸವ, ಗಾಂಧಿ ಅಹಿಂಸಾವಾದಿಗಳಾಗಿದ್ದಾರೆ.

ಶಾಂತಿ: ಮಾನವನಿಗೆ ಸಿರಿ-ಸಂಪತ್ತುಗಳಿರಬಹುದು. ಶಾಂತಿ ಒಂದಿಲ್ಲದೆ ಆತ ದಾರಿದ್ರ್ಯವೇ ಸರಿ. ಶಾಂತಿಗಾಗಿ ಮಾನವ ನಿಸ್ವಾರ್ಥಿಯಾಗಬೇಕು. ಆಸೆ ದೂಡಬೇಕು.

ಕ್ಷಮಾ: ಮಾನವ ಕ್ಷಮಾಗುಣದಿಂದ ಹಿರಿಯನಾಗುವನು. ದ್ವೇಷ ನಾಶವಾಗುವುದು. ಕ್ಷಮಾಜೀವಿ ಭೂಮಿಗೆ ಸಮಾನ ಎನಿಸುವನು.

ಜ್ಞಾನದಾಹ : ದೇಹಕ್ಕೆ ಹಸಿದಿರುವಂತೆ ಆತ್ಮಕ್ಕೂ ಹಸಿವಿರುವುದು. ಅನ್ನ ಆಹಾರಾದಿಗಳಿಂದ ದೇಹದ ಹಸಿವು ಹಿಂಗಿದರೆ, ಆತ್ಮದ ಹಸಿವು ಜ್ಞಾನದಿಂದ ಹಿಂಗುವುದು. ಆದುದರಿಂದ ಜ್ಞಾನದಾಹಿಯಾಗಿರಬೇಕು.

ಸಹಕಾರತತ್ವ ಮಾನವನ ವಿಕಾಸಕ್ಕೆ ಸಹಕಾರತತ್ವ ಅತ್ಯಗತ್ಯ. ಕೊಳ್-ಕೊಡುಗೆಯಿಂದ ಸಹಕಾರಿ ಎನಿಸಿದಾಗ ಬದುಕಿನಲ್ಲಿ ಸುಖ ದೊರಕುವುದು. ಪರೋಪಕಾರವೇ ಪುಣ್ಯ, ಪರಪೀಡನೆಯೇ ಪಾಪ

ಈ ಮುಂತಾದ ಮೌಲ್ಯಗಳು ಹೆಚ್ಚಿಸಲು ಗುರುಗಳು ಮುಂದಾಗಬೇಕಾದುದು ಇಂದು ಅನಿವಾರ್ಯವಾಗಿದೆ. ಮೌಲ್ಯಶಿಕ್ಷಣವೇ ಮಾನವನ ಮುನ್ನಡೆಗೆ ಸೋಪಾನ, ಇದರಿಂದ ಅವನ, ಸಮಾಜದ, ದೇಶದ, ವಿಶ್ವದ ಕಲ್ಯಾಣವಾಗುವುದು. ಈ ಮೌಲ್ಯಗಳೊಂದಿಗೆ 'ನೈತಿಕಪಂಚಶೀಲ'ಗಳಾದ ಸ್ವಚ್ಛತೆ-ಸತ್ಯಸಂಧತೆ-ಶ್ರಮದ ದುಡಿಮೆ-ಸಮಾನತೆ-ಸಹಕಾರಿಭಾವಗಳಿಗೆ ಶಿಕ್ಷಕರು ಮಹತ್ವ ನೀಡಬೇಕು. ವಿದ್ಯಾರ್ಥಿಗಳ ಅಂತರಂಗದಲ್ಲಿ ತುಂಬಬೇಕು. ಶಿಕ್ಷಣದ ಹೊಂಬೆಳಕಿನಲ್ಲಿ ಅವು ಮಿನುಗಬೇಕು. ಅವನ ಬದುಕನ್ನು ಸಾರ್ಥಕಗೊಳಿಸಬೇಕು.

❖

### ಗಾಂಧೀಜಿ ನುಡಿಮುತ್ತುಗಳು

ಸಾಮಾನ್ಯವಾಗಿ ರಾಜಕಾರಣವೆಂದರೆ ಕುಟಿಲತೆಯೇ, ಮೋಸ-ದೌರ್ಜನ್ಯಗಳೇ ಅದರ ತಳಹದಿ. ಇದನ್ನು ಬದಲಾಯಿಸಿ, 'ರಾಮರಾಜ್ಯ'ವನ್ನು- Kingdom of God on Earth ಸ್ಥಾಪಿಸಬೇಕೆಂದು ನನ್ನ ಆಸೆ. ರಾಮರಾಜ್ಯದ ವಿಷಯದಲ್ಲಿ ಒಂದು ಮಾತು. ಧಾರ್ಮಿಕ ದೃಷ್ಟಿಯಲ್ಲಿ ಅದು ಭೂಮಿಯ ಮೇಲೆ ಪರಮಾತ್ಮ ಅಧಿಕಾರವೆನಿಸುತ್ತದೆ. ರಾಜಕೀಯ ದೃಷ್ಟಿಯಲ್ಲಿ ಅದೊಂದು ಪೂರ್ಣ ಪ್ರಜಾಪ್ರಭುತ್ವ. ಜಾತಿ, ಮತ, ಕುಲ, ಲಿಂಗ, ವರ್ಣ ಇವೆಲ್ಲವುಗಳ ಅಸಮಾನತೆ ಅಲ್ಲಿರುವುದಿಲ್ಲ. ಸಮಗ್ರ ದೇಶವೂ, ರಾಷ್ಟ್ರವೂ ಪ್ರಜೆಗಳದು. ಸುಲಲಿತವಾಗಿ, ಸರಳವಾಗಿ ನ್ಯಾಯವು ದೊರೆಯುತ್ತವೆ.

ಧಾರ್ಮಿಕ ಸ್ವಾತಂತ್ರ್ಯ, ವಾಕ್‌ಸ್ವಾತಂತ್ರ್ಯ ಮತ್ತು ಪ್ರಕಟಣ ಸ್ವಾತಂತ್ರ ಇವೆಲ್ಲವೂ ನೀತಿಯ ಹಿನ್ನಲೆಯಲ್ಲಿ, ಬೆಳೆಯುವುದರಿಂದ ತಾವೇ ತಾವಾಗಿರುತ್ತವೆ. ಇಂಥ ರಾಷ್ಟ್ರವು ಸತ್ಯ ಅಹಿಂಸೆಗಳ ಬುನಾದಿಯ ಮೇಲೆ ರಚಿತವಾಗುವುದು. ಸ್ವಯಂ ಆಡಳಿತದಿಂದ, ಸ್ವಶಕ್ತಿಯಿಂದ ಸ್ವಪರಿಪೂರ್ಣತೆ ಪಡೆದು ಸುಖ ಪ್ರಗತಿಗಳನ್ನು ಅನುಭವಿಸುವ ಗ್ರಾಮವೂ, ಜನಸ್ತೋಮವೂ ಅಲ್ಲಿ ಕಂಗೊಳಿಸುತ್ತದೆ. ಅದೊಂದು 'ಕನಸು' ಎನ್ನುವವರುಂಟು. ನನ್ನ ಕನಸು ನನಸಾಗಲೆಂದೇ, ಕನಸಿನ ಸಾಮ್ರಾಜ್ಯದಲ್ಲಿ ದುಡಿದು ಸಾಯುವುದೇ ನನ್ನ ಯೋಗ್ಯ ಕರ್ಮ.







# ಶಿವಶರಣ ಹರಳಯ್ಯ

-ಹೆಚ್. ಕಮಲ*

೧೨ನೇ ಶತಮಾನದಲ್ಲಿ ನಡೆದ ಕಲ್ಯಾಣ ಕ್ರಾಂತಿಯ ಶಿವಶರಣರಾದ ಸಮಗಾರ ಹರಳಯ್ಯನವರು ಅಮೂಲ್ಯ ರತ್ನವಾಗಿದ್ದರು. ಅನುಭವ ಮಂಟಪದ ಸಂದೇಶಗಳನ್ನು ಚಾಚು ತಪ್ಪದೇ ಪಾಲಿಸಿದವರು. ತಮ್ಮ ಜೀವನದಲ್ಲಿ ಅಳವಡಿಸಿಕೊಂಡ ಅನುಭಾವಿಗಳು. ಕಲ್ಯಾಣಮ್ಮನವರು ಹರಳಯ್ಯನವರ ಸತಿಯಾಗಿ, ಮಾರ್ಗದರ್ಶಕಳಾಗಿ ಪತಿಯನ್ನು ಬಾಳಪಥದಲ್ಲಿ ಮುನ್ನಡೆಸಿದ ಮಹಾಶಿವಶರಣೆ, ಸತಿ-ಪತಿಗಳಿಬ್ಬರೂ ಇಷ್ಟಲಿಂಗಕ್ಕೆ ನಿಷ್ಠಾಪರರಾಗಿದ್ದರು. ನಿತ್ಯವೂ ತಮ್ಮ ಸತ್ಯ ಶುದ್ಧ ಕಾಯಕವಾದ ಚಪ್ಪಲಿ ತಯಾರಿಸುವ ಕಾಯಕ ಮಾಡುತ್ತಿದ್ದರು. ಅದರಿಂದ ಬಂದ ಸಂಪಾದನೆಯನ್ನು ಲಿಂಗಾರ್ಚನೆ, ಜಂಗಮ ದಾಸೋಹ ಮಾಡುತ್ತ ನಿತ್ಯತೃಪ್ತರಾಗಿರುತ್ತಿದ್ದರು.

ಹರಳಯ್ಯನವರು ಹಿರಿಯ ಮಾಹೇಶ್ವರರೆನಿಸಿಕೊಂಡಂತಹ ಮಹಾನುಭಾವರು. ಸದುವಿನಯ ಸಾಕಾರ ಮೂರ್ತಿಯಾಗಿದ್ದರು. ಕಲ್ಯಾಣಮ್ಮನವರು ಪತಿಗೆ ತಕ್ಕ ಸತಿಯಾಗಿದ್ದರು. ಮಗ ಶೀಲವಂತ ಕಲಾಕಾರನಾಗಿದ್ದನು. ಚಿತ್ರಕಲೆಯಲ್ಲಿ ಪಳಗಿದವನಾಗಿದ್ದನು. ಹರಳಯ್ಯ ದಂಪತಿಗಳದು ಚಿಕ್ಕದಾದ ಚೊಕ್ಕ ಸಂಸಾರ ವಾಗಿತ್ತು. ಕಾಯಕ, ದಾಸೋಹ, ಲಿಂಗಾರ್ಚನೆ ಹಾಗೂ ಅನುಭವ ಮಂಟಪದಲ್ಲಿ ಶಿವಾನುಭವ ಅವರ ದಿನಚರಿಯಾಗಿತ್ತು.

ಒಂದು ದಿವಸ ಹರಳಯ್ಯನವರು ಆ ದಿನದ ಕಾಯಕ ಮುಗಿಸಿಕೊಂಡು ಅನುಭವ ಮಂಟಪಕ್ಕೆ ಹೋಗುತ್ತಿದ್ದರು. ಅದೇ ದಾರಿಯಲ್ಲಿ ಎದುರಿಗೆ ಬಸವಣ್ಣನವರು ಬಂದರು. ಮಹಾದಂಡನಾಯಕ ಬಸವಣ್ಣನವರನ್ನು ಕಂಡ ಹರಳಯ್ಯನವರು ಶರಣೆಂದು ತಲೆಬಾಗಿದರು. ಅದಕ್ಕೆ ಬಸವಣ್ಣನವರು ಶರಣು ಶರಣಾರ್ಥಿ ಹರಳಯ್ಯನವರೇ ಎಂದು ಪ್ರತಿಯಾಗಿ ವಂದಿಸಿ ಮುನ್ನಡೆದರು. ಈ ಘಟನೆ ಹರಳಯ್ಯನವರ ಮನಸ್ಸಿಗೆ ಸಮಾಧಾನ ತರಲಿಲ್ಲ. ಕಳವಳಕ್ಕೆ ಎಡೆಮಾಡಿ ಕೊಟ್ಟಿತು. ನನಗಿಂತಲೂ ಒಂದು ಶರಣು ಹೆಚ್ಚು ಹೇಳಿ ಬಿಟ್ಟರು. ನನಗೆ ಸಲ್ಲದ ಮನ್ನಣೆ ಸಲ್ಲಿಸಿದರು ಎಂಬ ಚಿಂತೆ ಪ್ರಬಲವಾಗಿ ಕಾಡಿತು. ಕಳೆಗುಂದಿದ ಮುಖ ಹೊತ್ತು ಮನೆಯ ಕಡೆ ನಡೆದರು.

ಶರಣೆ ಕಲ್ಯಾಣಮ್ಮ ಗಂಡನ ಕಳೆಗುಂದಿದ ಮುಖ ಕಂಡಳು. ಪ್ರಸನ್ನಚಿತ್ತರಾಗಿರಬೇಕಾದ ಶರಣರಿಗೆ ದುಗುಡವೇಕೆ? ದುಗುಡ ಆವರಿಸಲು ಅದಾವ ಕೊರತೆಯಾಗಿದೆ? ಎನ್ನುತ್ತಾ ಪಾದಕ್ಕೆ ನೀರೆರೆದು ಸ್ವಾಗತಿಸಿದಳು. ಅದಕ್ಕೆ ಹರಳಯ್ಯನವರು 'ಏನು ಹೇಳಲಿ ಕಲ್ಯಾಣಿ! ಎಂಥ ಅಚಾತುರ್ಯ ನಡೆದುಹೋಯಿತು. ತಮ್ಮ ಆಸ್ಥಾನದ ಕಾಯಕ ಮುಗಿಸ್ಕೊಂಡು ಬರುತ್ತಿದ್ದ ಬಸವಣ್ಣನವರಿಗೆ ಶರಣು ಎಂದೆ. ಅದಕ್ಕೆ ಅವರು ಶರಣು, ಶರಣಾರ್ಥಿ ಎಂದರು. ಒಂದು ಶರಣು ಹೆಚ್ಚು ಹೇಳಿಬಿಟ್ಟರು. ನನ್ನ ಮೇಲೆ ಹಿರಿತನದ ಶ್ರೇಷ್ಠತೆಯ ಭಾರ ಹೊರಿಸಿದರು. ಏನು ಮಾಡಲಿ ಎಂಬ ಕೊರಗು ನನ್ನ ಮನಸ್ಸನ್ನು ಕೊರೆಯುತ್ತಿದೆ ಹೇಗಾದರೂ ಈ ಹಿರಿತನದ ಭಾರ ಕಳೆದುಕೊಳ್ಳಲು ಒಂದು ಉಪಾಯ ಹೇಳಬಾರದೆ ಎಂದು ತಮ್ಮ ಮನದಾಳದ ದುಗುಡವನ್ನು ತೋಡಿಕೊಂಡರು.

ಅದಕ್ಕೆ ಕಲ್ಯಾಣಮ್ಮನವರು ಇದಕ್ಕೊಂದು ಪರಿಹಾರವಿದೆ ಸ್ವಾಮಿ ಎಂದರು ಹಾಗೂ ಪರಿಹಾರವನ್ನೂ ಸೂಚಿಸಿದರು. ಹರಳಯ್ಯನವರು ತಮ್ಮ ಪತ್ನಿಯ ಆಸೆಯಂತೆ ಆ ಪರಿಹಾರವನ್ನು ಒಪ್ಪಿಕೊಂಡರು.

ಹರಳಯ್ಯನವರು ತಮ್ಮ ಬಲತೊಡೆಯ ಚರ್ಮ ತೆಗೆದರು. ಕಲ್ಯಾಣಮ್ಮನವರು ತಮ್ಮ ಎಡತೊಡೆಯ ಚರ್ಮ ತೆಗೆದರು. ಆ ಚರ್ಮಗಳಿಗೆ ತಮ್ಮ ಭಾವಚಿತ್ರವನ್ನು ಮಾಡಿಸಿದರು. ಪಾದರಕ್ಷೆಗಳನ್ನು ತಯಾರಿಸಿದರು. ಬಸವಣ್ಣನವರಿಗೆ ಅರ್ಪಿಸಿ ತಮ್ಮ ಹಿರಿತನದ ಪಾಪವನ್ನು ಕಳೆದುಕೊಳ್ಳಲು ತೀರ್ಮಾನಿಸಿದರು. ಪತ್ನಿ ಕಲ್ಯಾಣಮ್ಮನವರು ಜತೆಗೂಡಿದರು. ಬಸವಣ್ಣನವರ ದಾಸೋಹ ಮನೆಯತ್ತ ನಡೆದರು. ಪಾದರಕ್ಷೆಗಳನ್ನು ಬಸವಣ್ಣನವರಿಗೆ ಅರ್ಪಿಸಿದರು. ಧನ್ಯತೆಯ ಕಂಬನಿಗರೆದು ಪುನೀತರಾದರು. ಆದರೆ ಬಸವಣ್ಣನವರು 'ಇವು ಕೂಡಲಸಂಗನಿಗೆ ಸಲ್ಲತಕ್ಕವೆಂದು' ತಮ್ಮ ತಲೆಯ ಮೇಲೆ ಹೊತ್ತರು. 'ಲಿಂಗ ಮಹರ್ಷಿಗಳಿಗೆ,

* ಬಡ್ಡಿಹಳ್ಳಿ, ತುಮಕೂರು.

ಶರಣರಿಗೆ, ಶಿವಶರಣರ ಪಾದರಕ್ಷೆಗಳನ್ನು ಕಾಯ್ದು ಬಂದ ಧರ್ಮ' ಎಂದು ಹೇಳಿ ಹಿಂತಿರುಗಿಸಿದರು. ಆಗ ಹರಳಯ್ಯನವರು ವಸ್ತ್ರದಲ್ಲಿ ಮುಚ್ಚಿದ ಚರ್ಮದ ಪಾದರಕ್ಷೆಗಳನ್ನು ತಲೆಯ ಮೇಲೆ ಹೊತ್ತರು. ಕೂಡಲಸಂಗನ ಕರುಣೆ ಎಂದು ತಿಳಿದರು. ಬಸವನಾಮಸ್ಮರಣೆ ಮಾಡುತ್ತಾ ದಂಪತಿಗಳು ಮನೆಯ ಕಡೆ ನಡೆದರು.

ಸೇನಾಪತಿ ಮಾದರಸನ ಮನೆಯ ಮುಂದೆ ದಂಪತಿಗಳು ಹಾದು ಹೋಗುತ್ತಿದ್ದರು. ಮಾದರಸ ಇವರನ್ನು ನೋಡಿದನು. ವಸ್ತ್ರದಲ್ಲಿ ಸುತ್ತಿದ ವಸ್ತುಗಳು ಏನೆಂದು ಪ್ರಶ್ನಿಸಿದನು. ಹರಳಯ್ಯನವರು ಹೇಳಲು ಹಿಂಜರಿದಾಗ, 'ಅವೇನು ಮುತ್ತು ಮಾಣಿಕ್ಯಗಳೇ' ಎಂದು ಸುತ್ತಿದ್ದ ಬಟ್ಟೆ ಎಳೆಯಲು ಹೋದನು. 'ಸೇನಾಪತಿಗಳೇ ತಡೆಯಿರಿ, ನಾನೇ ತೋರಿಸುತ್ತೇನೆ. ಎಂದರು. ಬಟ್ಟೆಯಲ್ಲಿ ಸುತ್ತಿದ್ದ ಪಾದರಕ್ಷೆಗಳನ್ನು ತೋರಿದರು. ಕಲಾಕೌಶಲ್ಯಗಳಿಂದ ಕೂಡಿದ ಪಾದರಕ್ಷೆಗಳನ್ನು ಮಾದರಸ ಕಂಡನು. ತನಗೆ ಬೇಕೆಂದು ಬಯಸಿದನು. ಅವು ಕೂಡಲಸಂಗನಿಗೆ ಸಂದಿವೆ ಮಾರುವವಲ್ಲ ಎಂದು ಆತನಲ್ಲಿ ನಿವೇದಿಸಿಕೊಂಡರು. ಅಂದರೆ ಅವು ನಮಗೆ ಸಲ್ಲುವುದಿಲ್ಲವೇ? ಇನ್ನೇನು ಪೂಜೆ ಮಾಡಲಿಕ್ಕೆ ಇವೆಯೆ? ಎಂದು ಗರ್ವದ ಮಾತಾಡಿದನು ಮಾದರಸ. ಪೂಜೆಗೆ ಯೋಗ್ಯವಾಗಿದ್ದು ಧರಿಸಲು ಅಸಾಧ್ಯವೇ? ಹಾಗಾದರೆ ಧರಿಸಿಯೇ ಬಿಡುತ್ತೇನೆ ಎಂದು ಕಸಿದುಕೊಂಡು ಧರಿಸಿದಾಗ

***ಹಾವಿನ ಹೆಡೆಯ ಕೊಂಡು ಕಿನ್ನೆಯ ತುರಿಸಿಕೊಂಡಂತೆ! ಉರಿವ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕುಬಿಡಿಸಿಕೊಂಡಂತೆ!***
***ಹುಲಿಯ ಮೀಸೆಯ ಹಿಡಿದು ಉಯ್ಯಾಲೆಯಾಡಿದಂತೆ!***
***ಕೂಡಲಸಂಗನ ಶರಣರೊಡನೆ ಮರೆತು ಸರಸವಾಡಿದರೆ!***
***ಸುಣ್ಣದಕಲ್ಲು ಮಡಿಲಲ್ಲಿ ಕಟ್ಟಿಕೊಂಡು ಮಡುವಿಗೆ ಹಾರಿದಂತೆ!***

ಮೈಉರಿ ಹತ್ತಿತು, ತುಂಬಾ ನೋವಾಯಿತು, ಕೂಗಾಡ ತೊಡಗಿಬಿಡ. ದಾಸಿಯರು ಓಡಿ ಬಂದರು. ನೀರು...ನೀರು... ಎಂದು ಕೂಗತೊಡಗಿದ. ಒಬ್ಬ ದಾನಿ ಹರಳಯ್ಯನವರ ಬಾನಿಯಿಂದಲೇ ನೀರನ್ನು ತಂದುಬಿಟ್ಟಳು. ಮಧುವರಸರ ಮೇಲೆ ಸುರಿದಳು. ಅವರ ಮೈಯುರಿ ಶಾಂತವಾಯಿತು. ಆಗ ಮಾದರಸರಿಗೆ ಅರ್ಥವಾಯಿತು. ಶರಣರ ಕಾಯಕ ನಿಷ್ಠೆ ಹಾಗೂ ಹರಳಯ್ಯನವರು ಬಸವಣ್ಣನವರಲ್ಲಿ ಇಟ್ಟ ನಿಷ್ಠೆಯ ಬಗೆ ವಿಚಾರಪರರಾದರು. ಅಂದಿನಿಂದ ಹರಳಯ್ಯನವರ ಬಗ್ಗೆ ಮಧುವರಸರಲ್ಲಿ ಅಪಾರ ಪ್ರೇಮ, ಭಕ್ತಿಭಾವ ಹುಟ್ಟಿತು. ಶರಣರ ಸಮ್ಮುಖದಲ್ಲಿ ಇಷ್ಟಲಿಂಗ ಪಡೆದರು. ಅನುಭವ ಮಂಟಪದ ಸದಸ್ಯರಾದರು.

ಈ ರೀತಿಯಾಗಿ ಹರಳಯ್ಯ ಮಧುವರಸರ ನಡುವೆ ಮಧುರ ಸಂಬಂಧ ಬೆಳೆಯಿತು. ಹರಳಯ್ಯನವರ ಏಕಮಾತ್ರ ಪುತ್ರ ಶೀಲವಂತನಿಗೆ ಮಧುವರಸರ ಮಗಳಾದ ಲಾವಣ್ಯವತಿಯನ್ನು ಕೊಟ್ಟು ವಿವಾಹ ಮಾಡಲು ನಿಶ್ಚಯಿಸಿದರು. ಪರಸ್ಪರ ಕುಟುಂಬಗಳ ಪರಸ್ಪರ ಕುಟುಂಬಗಳ ಸಮ್ಮತಿಯ ಮೇರೆಗೆ ಈ ವಿವಾಹವು ಜರುಗಿತು. ಬಸವಣ್ಣನವರೊಡಗೂಡಿ ಎಲ್ಲ ಶರಣ ಶರಣೆಯರೂ ಸಮ್ಮತಿಸಿದರು, ಪ್ರೋತ್ಸಾಹ ಕೊಟ್ಟರು.

ಆದರೆ ಮಧುವರಸರು ಪೂರ್ವದಲ್ಲಿ ಬ್ರಾಹ್ಮಣರಾಗಿದ್ದರು. ಪೂರ್ವದಲ್ಲಿ ಸಮಗಾರನಾಗಿದ್ದ ಹರಳಯ್ಯನವರೊಡನೆ ವಿವಾಹ ಸಂಬಂಧ ಬೆಳೆಸಿದರು. ಕೆಲವು ಸಂಪ್ರದಾಯವಾದಿಗಳು ಇದನ್ನು ವಿರೋಧಿಸಿದರು, ಬೊಬ್ಬಿಟ್ಟರು. ಬಸವಣ್ಣನವರೇ ಈ ಧರ್ಮ ವಿರೋಧಿಕೃತ್ಯವನ್ನು ಬೆಂಬಲಿಸಿದ್ದಾರೆ. ಸನಾತನ ಧರ್ಮವನ್ನು ಹಾಳುಮಾಡುತ್ತಿದ್ದಾರೆಂದು ಅರಸ ಬಿಜ್ಜಳನಿಗೆ ದೂರುಕೊಟ್ಟರು. ಧರ್ಮಾಂಧರ ಮಾತಿಗೆ ಬೆಲೆ ಕೊಟ್ಟನು ಬಿಜ್ಜಳ. ಬಸವಣ್ಣ, ಮಧುವರಸ ಹಾಗೂ ಹರಳಯ್ಯನವರನ್ನು ವಿಚಾರಗೊಳಪಡಿಸಿದನು. ಬಸವಣ್ಣನವರು ಇಲ್ಲಿ ಯಾವ ಜಾತಿಯೂ ಇಲ್ಲ ಎಲ್ಲರೂ ಲಿಂಗ ದೀಕ್ಷೆ ಪಡೆದ ಲಿಂಗವಂತರು. ಈ ವಿವಾಹವು ತಪ್ಪಲ್ಲ ಎಂದು ವಾದಿಸಿದರು.

ಯಾವುದಕ್ಕೂ ಕಿವಿಗೊಡದ ಬಿಜ್ಜಳ, ಹರಳಯ್ಯ, ಕಲ್ಯಾಣಮ್ಮ, ಮಧುವರಸ, ಶೀಲವಂತ ಹಾಗೂ ಲಾವಣ್ಯವತಿಯರಿಗೆ ಶಿಕ್ಷೆ ವಿಧಿಸಿದ. ಬಸವಣ್ಣನವರು ಕೂಡಲಸಂಗನ ಸನ್ನಿಧಾನಕ್ಕೆ ಹೋದರು. ಕಲ್ಯಾಣ ಕ್ರಾಂತಿಯಾಯಿತು. ಶರಣರ ಕಗ್ಗೊಲೆಯಾಯಿತು.

ವಚನಸಾಹಿತ್ಯ ಹೊತ್ತ ಶರಣರ ಗುಂಪು ತಂಡ ತಂಡವಾಯಿತು. ಬೇರೆ ಬೇರೆ ಕಡೆ ಸಾಗಿತು. ಹರಳಯ್ಯ, ಕಲ್ಯಾಣಮ್ಮ, ಮಧುವರಸ, ಶೀಲವಂತ, ಲಾವಣ್ಯವತಿಯರು ಸಮಾನತಾಧರ್ಮಕ್ಕಾಗಿ ಬಲಿದಾನ ಮಾಡಿದರು. ಈ ಬಲಿದಾನ ಧಾರ್ಮಿಕ ಇತಿಹಾಸವನ್ನು ಸುವರ್ಣಾಕ್ಷರಗಳಲ್ಲಿ ಬರೆಯಬೇಕಾದಂಥದು. ಇಂಥ ಶರಣರ ಜೀವನ ಚರಿತ್ರೆಯನ್ನು ಓದುವುದೇ ಒಂದು ಪುಣ್ಯ.

❖







## ದೇಶಕ್ಕೇನೋ ಸ್ವಾತಂತ್ರ್ಯ ಲಭಿಸಿತು; ಆದರೆ ಜನತೆಗೆ?

-ಎಸ್. ರೇಣುಕಾರಾಧ್ಯ *

೧೯೪೭ರಲ್ಲಿ ಸ್ವಾತಂತ್ರ್ಯ ಲಭಿಸಿತು. ಆದರೆ ಜನತೆಗೆ?

ಅ) ಜಗತ್ತಿನ ಅತಿಹೆಚ್ಚು ಬಡವರು ಭಾರತದಲ್ಲಿದ್ದಾರೆ.
ಆ) ಜಗತ್ತಿನ ಅತ್ಯಂತ ಹೆಚ್ಚು ಮಕ್ಕಳು ಹುಟ್ಟಿದ ಮೂರು ವರ್ಷಗಳ ಒಳಗೆ ಸಾಯುತ್ತಿರುವುದು ಭಾರತದಲ್ಲಿ.
ಇ) ಜಗತ್ತಿನ ಅತಿಹೆಚ್ಚು ಮಧುಮೇಹಿಗಳು, ಹೃದ್ರೋಗಿಗಳು ಇರುವುದು ಭಾರತದಲ್ಲಿ.
ಈ) ಜಗತ್ತಿನ ಅತಿಹೆಚ್ಚು ಅನಕ್ಷರಸ್ಥರಿರುವುದು ಭಾರತದಲ್ಲಿ.
ಉ) ಜಗತ್ತಿನಲ್ಲಿ ಅತಿಹೆಚ್ಚು ಜನ ಆಹಾರದ ಅಭದ್ರತೆಯನ್ನು ಎದುರಿಸುತ್ತಿರುವುದು ಭಾರತದಲ್ಲಿ.
ಊ) ಭಾರತದ ೮೫೦ ಮಿಲಿಯನ್‌ಗೂ ಹೆಚ್ಚು ಜನರ ಆದಾಯ ಸರಾಸರಿ ದಿನವೊಂದಕ್ಕೆ ರೂ. ೨೫/-ಕ್ಕಿಂತಲೂ ಕಡಿಮೆ.

ಮತ್ತೆ ಕೆಲವು ಅಂಕಿಅಂಶಗಳು.

ಅ) ಜಗತ್ತಿನ ಅತಿದೊಡ್ಡ ಪ್ರಜಾಪ್ರಭುತ್ವವೆಂಬ ಹೆಗ್ಗಳಿಕೆಯಿಂದ ಕೂಡಿರುವ ಭಾರತದ ಸಂಸತ್ತಿನಲ್ಲಿ ಶೇ. ೯೫%ಕ್ಕೂ ಹೆಚ್ಚು ಮಂದಿ ಕೋಟ್ಯಾಧೀಶರು.
ಆ) ಸಂಸತ್ ಸದಸ್ಯರಲ್ಲಿ ೧೫೦ಕ್ಕೂ ಹೆಚ್ಚುಮಂದಿ ಕ್ರಿಮಿನಲ್ ಮೊಕದ್ದಮೆ ಉಳ್ಳವರು.
ಇ) ಜಗತ್ತಿನ ಮೊದಲ ನೂರುಮಂದಿ ಶ್ರೀಮಂತರ ಪೈಕಿ ಭಾರತದಲ್ಲಿಯೇ ಹತ್ತು ಮಂದಿಗೂ ಮಿಗಿಲಾಗಿದ್ದಾರೆ.
ಈ) ಭಾರತದಲ್ಲಿ ರಸ್ತೆ-ರೈಲು ಮುಂತಾದ ಅಪಘಾತಗಳಲ್ಲಿ ಜಗತ್ತಿನಲ್ಲಿಯೇ ಅತಿ ಹೆಚ್ಚು ಜನರ ಸಾವು ಸಂಭವಿಸುತ್ತದೆ.
ಉ) ಜಗತ್ತಿನಲ್ಲಿಯೇ ಜನರ ಜೀವನಾಡಿಯಾದ ಬೇಸಾಯವನ್ನು ನಿರ್ಲಕ್ಷಿಸಿರುವುದು ಭಾರತದಲ್ಲಿಯೇ.
ಊ) ಜಗತ್ತಿನ ಮೊದಲ ಎರಡು ನೂರು ಶ್ರೇಷ್ಠ ದರ್ಜೆಯ ವಿಶ್ವವಿದ್ಯಾಲಯಗಳಲ್ಲಿ ಭಾರತದಲ್ಲಿ ಒಂದೂ ಇಲ್ಲದಿರುವುದು.

ಬಹುಷಃ ಮೇಲಿನ ಉದಾಹರಣೆಗಳನ್ನು ಗಮನಿಸಿದರೆ ಭಾರತದ ಸಮಗ್ರ ಚಿತ್ರಣವನ್ನು ಯಾರಾದರೂ ಊಹಿಸಿಕೊಳ್ಳಬಹುದು. ಒಂದು ಮಾತಿದೆ. Poverty and Democracy donot go together.

ಹಾಗಾದರೆ ಭಾರತದಲ್ಲಿ ಪ್ರಜಾಪ್ರಭುತ್ವ ಇದೆಯೆ? ಸರಿಸುಮಾರು ಸಾವಿರ ವರ್ಷಗಳ ದಾಸ್ಯದಿಂದ ಬಳಲಿ ಬೆಂಡಾಗಿದ್ದ ದೇಶದ ಜನರಲ್ಲಿ ಸ್ಫೂರ್ತಿ ತುಂಬಿ, ಉತ್ಸಾಹ ಭರಿತರನ್ನಾಗಿ ಮಾಡಿ ಜಗತ್ತಿನಲ್ಲಿ 'ಸೂರ್ಯಮುಳುಗದ ಸಾಮ್ರಾಜ್ಯ'ವೆಂದೇ ಮನ್ನಣೆಗೆ ಪಾತ್ರವಾಗಿದ್ದ, ದೈತ್ಯಶಕ್ತಿಯ ರಾಷ್ಟ್ರವೊಂದರ ವಿರುದ್ಧ ಯಾವುದೇ ಆಯುಧಗಳ ಹೋರಾಟವಿಲ್ಲದೆ ಕೇವಲ ನೈತಿಕತೆಯಿಂದಲೇ ಸ್ವಾತಂತ್ರ್ಯವನ್ನು ಪಡೆದ ಜಗತ್ತಿನ ಇತಿಹಾಸದಲ್ಲಿ ಏಕೈಕ ಉದಾಹರಣೆ 'ಭಾರತದ ಸ್ವಾತಂತ್ರ್ಯ.' ಇದಕ್ಕೆ ಕಾರಣವೇನು?

ಭಾರತದ್ದೇ ಒಂದು ವಿಶಿಷ್ಟ ಗುಣ. ನಾಯಕನಾದವನು ತ್ಯಾಗಮನೋಭಾವದವನಾಗಿದ್ದು, ವಿಶಾಲದೃಷ್ಟಿಯಿಂದ ಕೂಡಿದ್ದಲ್ಲಿ ಅವನ ಮಾತನ್ನು ಕೇಳಲು, ಅಂತೆಯೇ ಸರ್ವಸ್ವವನ್ನು ತ್ಯಾಗಮಾಡಲು ಭಾರತೀಯ ಯಾವಾಗಲೂ ಮುಂದು. ಹಾಗಾದರೆ ಇಂದಿನ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ದೇಶದಲ್ಲಿ ಸಮರ್ಥರಾದ ನಾಯಕರಿಲ್ಲವೆಂದೆ? ಅದನ್ನು ಪ್ರತ್ಯೇಕವಾಗಿ ಹೇಳುವ ಅವಶ್ಯಕತೆಯಿದೆಯೆ? ದೇಶದಲ್ಲಿ ಇಂದು ಎಲ್ಲರೂ ಮುಖಂಡರೇ! ಆದರೆ ಒಬ್ಬ ನಾಯಕನನ್ನು ಕಾಣಲಾಗುವುದಿಲ್ಲ! ನಿಮಗೆ ಅನುಮಾನವೆ? ಹಾಗಾದರೆ ವಿಶಾಲವ್ಯಕ್ತಿತ್ವದ ತಳಹದಿಯ ಮೇಲೆ ರಾಷ್ಟ್ರ ಚಿಂತನೆಯನ್ನು ಮಾತ್ರವೇ ಉಸಿರಾಗಿಸಿಕೊಂಡಿದ್ದ ಮಹಾತ್ಮಾ ಗಾಂಧಿ, ವಲ್ಲಭಭಾಯಿ ಪಟೇಲ್, ಜವಾಹರ್ ಲಾಲ್‌ನೆಹರು, ಸುಭಾಷ್‌ಚಂದ್ರ ಬೋಸ್, ಬಾಬು ರಾಜೇಂದ್ರಪ್ರಸಾದ್, ಎಸ್. ನಿಜಲಿಂಗಪ್ಪ, ಲಾಲ್ ಬಹದ್ದೂರ್ ಶಾಸ್ತ್ರಿ, ಜಯಪ್ರಕಾಶ್ ನಾರಾಯಣ್-ಇಂತಹ ಯಾರಾದರೂ ಒಬ್ಬ ವ್ಯಕ್ತಿಯನ್ನು ಇಂದಿನ ರಾಜಕೀಯದಲ್ಲಿ ಕಾಣಲಾದೀತೇ?

ಯಾವುದೇ ಒಂದು ರಾಷ್ಟ್ರದಲ್ಲಿ 'ಪ್ರಜಾಪ್ರಭುತ್ವ ಯಶಸ್ವಿಯಾಗಬೇಕಾದರೆ ಅಧಿಕಾರವು ನಿಸ್ವಾರ್ಥಿಗಳೂ, ಸಚ್ಚಾರಿತ್ರರೂ, ಶೀಲವಂತರೂ ಆದ ವ್ಯಕ್ತಿಗಳಲ್ಲಿರಬೇಕಾಗುತ್ತದೆ' ಎಂಬ ದಾರ್ಶನಿಕರ ನಿಲುವು ಸರಿಯಾದುದೇ ಆದರೂ ಭಾರತದಲ್ಲಿ ಕ್ರಮೇಣ ಅಧಿಕಾರವು ಮೂರನೇ ದರ್ಜೆಯ ವ್ಯಕ್ತಿಗಳನ್ನು ಆಶ್ರಯಿಸಿಕೊಂಡಿತು. ರಾಷ್ಟ್ರದಲ್ಲಿ ಪ್ರಸ್ತುತ

* ಶ್ರೀನಗರ, ಶ್ರೀ ಸಿದ್ಧಗಂಗಾ ಮಠದ ರಸ್ತೆ, ತುಮಕೂರು.

ಒಬ್ಬನೇ ಒಬ್ಬ ನಿಜವಾದ ನಾಯಕನಿಲ್ಲವೆಂದರೆ ಅದು ದೇಶದ ದೌರ್ಭಾಗ್ಯವೇ ಸರಿ! ಶಿವಾಜಿಯ ಮರಣಾನಂತರ ಮರಾಠ ರಲ್ಲಿ ಹಲವು ನಾಯಕರು ಮೂಡಿಬಂದ ಐತಿಹಾಸಿಕ ಪ್ರಸಂಗ ವನ್ನು ಖ್ಯಾತ ಇತಿಹಾಸಕಾರ ಡಾ॥ ಬಿ. ಷೇಖ್ ಆಲಿಯವರು ವಿವರಿಸುವಂತೆ 'In leaderless society everyone becomes leader' ಎನ್ನುವ ಮಾತು ಇಂದು ನಮ್ಮ ದೇಶಕ್ಕೆ ಯಥಾವತ್ತಾಗಿ ಅನ್ವಯಿಸುತ್ತದೆ.

ನಮ್ಮ ಸಂವಿಧಾನದ ಉಪೋದ್ಘಾತವು ಪ್ರಾರಂಭವಾಗುವುದೇ We the people of India ಎಂಬುದರಿಂದ. ಮುಂದೆ India into a sovereign, socialist, secular, democratic republic and to secure to all its citizens, Justice, liberty, equality and fraternity. ತತ್ತ್ವಗಳನ್ನು ಒಳಗೊಂಡಂತೆ ದೇಶದ ಕಟ್ಟ ಕಡೆಯ ವ್ಯಕ್ತಿಯ ಅಭಿವೃದ್ಧಿಗೂ ಆದ್ಯತೆಯನ್ನು ಕೊಡುವ ಆಶಯವನ್ನು ವ್ಯಕ್ತ ಪಡಿಸುತ್ತದೆ. ಆದರೆ ಇಂದು ನಡೆಯುತ್ತಿರುವುದೇನು? ೨೧ ಸೆಪ್ಟಂಬರ್ ೨೦೧೧ರ 'ಹಿಂದೂ' ಪತ್ರಿಕೆಯಲ್ಲಿ ಭಾರತದ ಸುಪ್ರಸಿದ್ಧ ಅಂಕಣಕಾರರಲ್ಲೊಬ್ಬರಾದ ಪಿ. ಸಾಯಿನಾಥ್ ರವರು ಪ್ರಸ್ತುತ ಭಾರತದ ಆರ್ಥಿಕ ಸಾಮಾಜಿಕ ಬದುಕಿನ ನೈಜಚಿತ್ರಣವನ್ನು ನೀಡುತ್ತಾ 'ಸಾಮಾನ್ಯ ಭಾರತೀಯನೊಬ್ಬನ ದಿನದ ಗಳಿಕೆ ರೂ ಕೇವಲ ೨೫ಕ್ಕೂ ಕಡಿಮೆ; ಆದರೆ ಅದೇ ಸಂದರ್ಭದಲ್ಲಿ ಕೇಂದ್ರದ ಮಂತ್ರಿಯೊಬ್ಬರ ದಿನನಿತ್ಯದ ಆದಾಯ ಕೇವಲ ರೂ. ೫ಲಕ್ಷ!. ಭೇಷ್ ಇದಲ್ಲವೆ ಪ್ರಜಾಪ್ರಭುತ್ವ! ಯಾವ ಪ್ರಜೆಗಳಿಂದ ಚುನಾಯಿತನಾದ ಸಂಸತ್ ಸದಸ್ಯ ನಂತರ ಮಂತ್ರಿಯಾಗಿ ಇಷ್ಟೊಂದು ಆದಾಯಗಳಿಸುವ ವ್ಯವಸ್ಥೆ ನಮ್ಮ ಪ್ರಜಾಪ್ರಭುತ್ವದಲ್ಲಿದೆ!

ನಮ್ಮ ನೆರೆಯ ಚೀನಾದೇಶ ನಮಗಿಂತಲೂ ಎರಡು ವರ್ಷ ತಡವಾಗಿ ಸ್ವತಂತ್ರವಾಯಿತು. ಆದರೆ ಇಂದಿನ ಚೀನಾದ ಸಾಧನೆಯನ್ನು ನೋಡಿ ಪಾಶ್ಚಾತ್ಯ ರಾಷ್ಟ್ರಗಳೂ ಬೆಚ್ಚಿ ಬೀಳುತ್ತವೆ! ಚೀನಿಯರ ಆಹಾರ ಪದಾರ್ಥಗಳ ಸರಾಸರಿ ಬಳಕೆ ಪ್ರತಿವ್ಯಕ್ತಿಗೆ ವರ್ಷವೊಂದಕ್ಕೆ ೯೦೦ ಕೆ.ಜಿ. ಆದರೆ ಭಾರತೀಯರ ಬಳಕೆ ೧೬೨ ಕೆ.ಜಿ. ಚೀನಾದಲ್ಲಿ ವರ್ಷವೊಂದಕ್ಕೆ ೬೫ ಸಾವಿರ ಮಂದಿ ಪಿ.ಹೆಚ್‌ಡಿ. ಪದವೀಧರರು ಹೊರಬಂದರೆ ನಮ್ಮಲ್ಲಿ ಕೇವಲ ೫ ಸಾವಿರ. ಅದರಲ್ಲಿ ಬಹುತೇಕರು ಯಾವ ಶ್ರಮವಿಲ್ಲದೆ ಹಣದ ಬಲದಿಂದ ಡಿಗ್ರಿ ಪಡೆದವರು. ಶಾಂಘೈ ನಗರದಲ್ಲಿ ಆರು ಅಂತಸ್ತುಗಳ ಮೇಲು ಸೇತುವೆಗಳು, ಗಂಟೆಗೆ ೪೫೦ ಕಿ.ಮೀ. ವೇಗದಲ್ಲಿ ಸಂಚರಿಸುವ ರೈಲುಗಳು, ಇಷ್ಟು ಸಾಕಲ್ಲವೆ ಅವರ ಪ್ರಗತಿ ತಿಳಿಯಲು! ಇನ್ನು ಕೆಲವೇ ವರ್ಷಗಳಲ್ಲಿ ವಿಶ್ವದ ನಂಬರ್ ಒನ್ ಆರ್ಥಿಕ ಶಕ್ತಿಯಾಗಿ ಹೊರಹೊಮ್ಮುವತ್ತ ದಾಪುಗಾಲಾಕುತ್ತಿದೆ. ವಿಶ್ವದ ಬೃಹತ್ ದೈತ್ಯ ಮಿಲಿಟರಿ ಶಕ್ತಿಯಾಗಿ ರೂಪುಗೊಳ್ಳುತ್ತಿರುವ ಚೀನಾದೊಂದಿಗೆ ಸಾವಿರಾರು ಕಿ.ಮೀ.ಗಳ ಗಡಿಯನ್ನುಳ್ಳ ನಮ್ಮ ದೇಶದ ಸುರಕ್ಷತೆ ಬಗ್ಗೆ ನಮಗೆ ಯಾವ ರೀತಿಯ ಖಾತರಿ ಇದೆ?

ಇಂತಹ ಹತಾಶೆಯ ಪರಿಸ್ಥಿತಿಯಲ್ಲಿ ಒಂದು ಸಣ್ಣ ಆಶಾಕಿರಣವೊಂದು ಗೋಚರಿಸುತ್ತಿದೆ. ಅದೇ ಅಣ್ಣಾ ಹಜಾರೆಯವರ ಭ್ರಷ್ಟಾಚಾರದ ವಿರುದ್ಧ ಹೋರಾಟ. ದೇಶದ ಯುವಜನತೆ ಅಪೂರ್ವ ಬೆಂಬಲವನ್ನು ತೋರಿಸಿದೆ. ಇಷ್ಟಾದರೆ ಸಾಲದು ದೀರ್ಘಕಾಲೀನ ಸುಧಾರಣೆಗಳಿಗಾಗಿ ಯುವಕರ ಪಡೆಗಳೇ ಬೇಕಾಗುತ್ತದೆ. ಅಣ್ಣಾ ಹಜಾರೆಯವರ ಹೋರಾಟದ ಫಲವಾಗಿ ನಮ್ಮ ಸಂಸತ್ತು 'ಜನಲೋಕಪಾಲ' ಮಸೂದೆಯ ಬಗ್ಗೆ ಒಪ್ಪಿಗೆ ಸೂಚಿಸಿದರೂ ಅದನ್ನು ರೂಪಿಸಿ ಜಾರಿಗೆ ತರುವ ಹೊಣೆಗಾರಿಕೆಯನ್ನು ಹೊತ್ತ ಆಡಳಿತ ಪಕ್ಷಕ್ಕೆ ಕಿಂಚಿತ್ತೂ ಆಸಕ್ತಿಯಿಲ್ಲದಿರುವ ವಿಷಯ ಅವರ ದಿನನಿತ್ಯದ ಹೇಳಿಕೆಗಳಿಂದಲೇ ಅನಾವರಣಗೊಳ್ಳುತ್ತಿದೆ. ಹಾಗಾದರೆ ಮುಂದೇನು?

ಸಂಪ್ರದಾಯಸ್ಥ ರಾಜಜೀಯ ವ್ಯವಸ್ಥೆಯನ್ನೇ ಬೆಂಬಲಿಸುತ್ತ ಬಂದಿದ್ದ ಅನೇಕ ಇಸ್ಲಾಮಿಕ್ ರಾಷ್ಟ್ರಗಳಾದ ಈಜಿಪ್ಟ್, ಸಿರಿಯಾ, ಲಿಬಿಯಾ ಮೊದಲಾದ ದೇಶಗಳು ಅಲ್ಲಿನ ಸರ್ವಾಧಿಕಾರಿಗಳ ಅನ್ಯಾಯಗಳ ವಿರುದ್ಧ ಬಂಡೆದ್ದು ಪ್ರಜಾಪ್ರಭುತ್ವ ವ್ಯವಸ್ಥೆಯ ಆಶೋತ್ತರಗಳನ್ನು ಈಡೇರಿಸಿಕೊಳ್ಳಲು ಹೋರಾಟ ನಡೆಸಿ ಒಂದು ಹಂತದವರೆಗೆ ಜಯಶಾಲಿಗಳಾಗಿರುವುದು ನಮ್ಮ ಕಣ್ಣ ಮುಂದಿದೆ.

ಆಧ್ಯಾತ್ಮಿಕ ನೆಲೆವೀಡಾದ ಭಾರತದಲ್ಲಿ ಸಾರ್ವಜನಿಕ ಕಲ್ಯಾಣಕ್ಕಾಗಿ ರೂಪಿಸುವ ಹೋರಾಟಕ್ಕೆ 'ಸತ್ಯಾಗ್ರಹ' ಮಾರ್ಗವನ್ನು ತೋರಿಸಿದ ಮಹಾತ್ಮ ಗಾಂಧೀಜಿಯವರ ಆದರ್ಶಗಳನ್ನೇ ಹಿಡಿದು ಶಾಂತಿಯುತ ಅಹಿಂಸಾತ್ಮಕ ಹೋರಾಟವನ್ನು ಸಮಸ್ತರೂ ಕನಿಷ್ಟ ಅನ್ಯಾಯ ತುಳಿತಕ್ಕೆ ಒಳಗಾದವರಾದರೂ ಬೆಂಬಲಿಸಿದಲ್ಲಿ, ಅತಿ ಶೀಘ್ರವಾಗಿ ಸುಧಾರಣೆಗಳನ್ನು ತಂದು ದೇಶದ ಸಮಸ್ತರಿಗೂ ಅಭಿವೃದ್ಧಿಯ ಪಾಲು ದೊರೆಯುವಂತೆ ಮಾಡಬಹುದಾಗಿದೆ. ಇದೆಲ್ಲವೂ ಒಂದೆರೆಡು ದಿನ ತಿಂಗಳು ವರ್ಷಗಳಲ್ಲಿ ಈಡೇರುವಂತಹುದಲ್ಲ. ಮತ್ತೊಮ್ಮೆ ದೇಶ ಶಾಂತಿಯುತ ಸುದೀರ್ಘ ಹೋರಾಟಕ್ಕೆ ತೊಡಗಿಸಿಕೊಳ್ಳದಿದ್ದರೆ ೧೯೪೭ರಲ್ಲಿ ದೊರೆತ ಸ್ವಾತಂತ್ರ್ಯಕ್ಕೆ ಅರ್ಥವಿಲ್ಲವಾಗುತ್ತದೆ. ❖





# ಸಿದ್ಧಗಂಗೆಯಲ್ಲಿ ವಿಜಯದಶಮಿ

ಹಬ್ಬಗಳು, ಉತ್ಸವಗಳು, ಜಾತ್ರೆಗಳು ಜೀವನೋತ್ಸಾಹದ ಸೋಪಾನಗಳು, ಬೇಸತ್ತ ಬದುಕಿಗೆ ಶಕ್ತಿವರ್ಧಕಗಳು. ದುಡಿದುಡಿದು ಸತ್ತಾಗ ಒಂದಿಷ್ಟು ಉಲ್ಲಾಸ, ಹುಮ್ಮಸ್ಸು, ನಗೆಯನ್ನು ತಂದುಕೊಡುವ ಹಬ್ಬಗಳ ಹಿಂದೆ ಜೀವನಪ್ರೀತಿಯ ರಸಸೂತ್ರವನ್ನು ಕಾಣಬಹುದು. 'ಉಂಡದ್ದೇ ಉಗಾದಿ ಮಿಂದದ್ದೇ ಮಹಾನವಮಿ' ಎಂಬ ಗಾದೆಯನ್ನು ಅವಲೋಕಿಸಿದಾಗ ಹಬ್ಬಗಳ ಆಚರಣೆಯಲ್ಲಿರುವ ಅರ್ಥ ತಿಳಿದೀತು.

ಶ್ರೀಮಠದಲ್ಲಿ ಗಣೇಶ, ಗೌರಿ, ಸಂಕ್ರಾಂತಿ, ನವರಾತ್ರಿ, ಜಾತ್ರೆ, ಗುರುವಂದನೆ, ಬಸವಜಯಂತಿ, ಅಟವೀಶ್ರೀಗಳವರ, ಉದ್ದಾನಶ್ರೀಗಳವರ ಆರಾಧನೆ, ಆಗಸ್ಟ್ 15ರ ಸ್ವಾತಂತ್ರ್ಯ ದಿನಾಚರಣೆ, ಜನವರಿ 26 ಗಣತಂತ್ರ ದಿನಾಚರಣೆ, ಅಕ್ಟೋಬರ್ 2ರ ಗಾಂಧಿ ಜಯಂತಿ ಮತ್ತು ಲಾಲ್‌ಬಹದ್ದೂರ್ ಶಾಸ್ತ್ರಿ ಜಯಂತಿ ಮುಂತಾದುವುಗಳನ್ನು ಆಚರಿಸುತ್ತ ಬರಲಾಗುತ್ತಿದೆ.

ದಿನಾಂಕ ಸೆಪ್ಟೆಂಬರ್ 27, 2011ರಿಂದ ಮಹಾಲಯ ಅಮಾವಾಸ್ಯೆ ಮೊದಲುಗೊಂಡು ನವರಾತ್ರಿ ಹಬ್ಬದ ಆಚರಣೆ ಶ್ರೀಕ್ಷೇತ್ರದ ಅಧಿದೇವರಾದ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯನ್ನು ವಿದ್ಯುಕ್ತವಾಗಿ ಪಟ್ಟಕ್ಕೆ ಕೂರಿಸಿ ಒಂಭತ್ತು ದಿನಗಳು ಶಾಸ್ತ್ರೋಕ್ತವಾಗಿ ಪೂಜಾದಿ ಕೈಂಕರ್ಯವನ್ನು ಸಮರ್ಪಿಸುತ್ತ ಬರಲಾಯಿತು. ದಿನಾಂಕ ಅಕ್ಟೋಬರ್ 3 ರಂದು ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ಮತ್ತು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರ ಸಾನ್ನಿಧ್ಯದಲ್ಲಿ ಶ್ರೀ ಶಾರದಾದೇವಿ ಪೂಜಾ ಕಾರ್ಯಕ್ರಮದೊಂದಿಗೆ ಶ್ರೀ ವಿದ್ಯಾಸಂಸ್ಥೆಯ ಶಿಕ್ಷಕರ ಮತ್ತು ನೌಕರರ ಸಮಾವೇಶ ನಡೆಯಿತು. 5ರಂದು ಆಯುಧಪೂಜೆಯಾಯಿತು. 6ರಂದು ವಿಜಯದಶಮಿ ಮಹೋತ್ಸವ ಜರುಗಿತು.

ಸಮಾರಂಭಕ್ಕೆ ಮಳೆ ಮುನ್ನಡಿ ಬರೆಯಿತು. ಬೆಟ್ಟದ ಮೇಲಿನಿಂದ ಮಂಗಳವಾದ್ಯಗಳೊಂದಿಗೆ ಸಕಲ ಛತ್ರಿ, ಚಾಮರ, ನಂದಿ ಧ್ವಜಗಳ ಸಮೇತ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯನ್ನು ಅಡ್ಡಪಲ್ಲಕ್ಕಿಯಲ್ಲಿಟ್ಟು ಸಾಲಂಕೃತಗೊಳಿಸಿ ವೇದಮಂತ್ರ ಸ್ವರವಚನ ಘೋಷದೊಡನೆ ಮಹಾನವಮಿ ಮಂಟಪಕ್ಕೆ ಕರೆತರಲಾಯಿತು. ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಹರಗುರುಚರಮೂರ್ತಿಗಳ ಸಮ್ಮುಖದಲ್ಲಿ ಸಾವಿರ ಸಾವಿರ ಸಂಖ್ಯೆಯಲ್ಲಿ ದೂರದ ವಿವಿಧ ಗ್ರಾಮ ನಗರಗಳಿಂದ ಆಗಮಿಸಿದ್ದ ಶ್ರೀಮಠದ ಭಕ್ತಾಧಿಗಳ, ಅಭಿಮಾನಿಗಳು ಹಳೆಯ ವಿದ್ಯಾರ್ಥಿಗಳ ಶ್ರೀಮಠದ ಆಡಳಿತ ಬಂಧುಗಳ, ಶಿಕ್ಷಕ ಬಂಧುಗಳ ಬೃಹತ್ ಜನಸ್ತೋಮದ ನಡುವೆ ಉತ್ಸವದ ಅಂದವಾದ ಸಮಾರಂಭ ಪ್ರಾರಂಭವಾಯಿತು. ಶ್ರೀ ಬಿ.ಎಸ್. ಮಲ್ಲಿಕಾರ್ಜುನಯ್ಯನವರಿಂದ ಪ್ರಾರ್ಥನೆಯ ಮೂಲಕ ಸಭೆಗೆ ಚಾಲನೆ ದೊರೆಯಿತು. ಶ್ರೀ ಪಿ.ಎನ್. ಚಂದ್ರಶೇಖರಯ್ಯ ನವರು ಸಮಸ್ತರನ್ನು ಸ್ವಾಗತಿಸಿದರು. ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಶ್ರೀಮಠದ ಶ್ರೀ ಬಸವೇಶ್ವರ ಶಿಕ್ಷಕ ತರಬೇತಿ ಸಂಸ್ಥೆ ಶ್ರೀ ಸಿದ್ಧಗಂಗಾ ಬಿ.ಪಿ.ಎಡ್. ಶಿಕ್ಷಕರ ಸಂಸ್ಥೆ, ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆ, ಶ್ರೀ ಜಗಜ್ಜ್ಯೋತಿ ಬಸವೇಶ್ವರ ನಾಟಕ ತಂಡದವರಿಂದ ವಿವಿಧ ಮನರಂಜನಾ ಕಾರ್ಯಕ್ರಮಗಳು ಜನಮನವನ್ನು ಉಲ್ಲಾಸಗೊಳಿಸಿದವು. ಸಂಪ್ರದಾಯದಂತೆ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಗೆ ರಾಜೋಪಚಾರ ಪೂಜೆ ನಡೆಯಿತು. ಪೂಜಾಕಾರ್ಯದಲ್ಲಿ ಭಾಗಿಗಳಾಗಿದ್ದ ಪುರೋಹಿತವರ್ಗದವರು ಪರಮಪೂಜ್ಯ ಶ್ರೀ ಶ್ರೀ ಗಳವರು ಆಶೀರ್ವದಿಸಿದ್ದ ಬಿಳಿಯ ಪಂಚೆ, ಕಾವಿಬಣ್ಣದ ಶಾಲು ಹೊದ್ದು ಮಂತ್ರಘೋಷಮಾಡಿದ್ದು ಇಡೀ ಸಮಾರಂಭಕ್ಕೆ ಕಳಸಪ್ರಾಯವಾಗಿದ್ದಿತು. ಈ ಮಧ್ಯೆ ಪಟಾಕಿ, ಬಾಣ, ಬಿರುಸುಗಳ ಬೆಳಕಿನ ಹಾಗೂ ಸದ್ದು ದೂರದ ಕ್ಯಾತ್ಸಂದ್ರದವರೆಗೂ ಕೇಳಿಸುತ್ತಿತ್ತು. ಸಭೆಯಲ್ಲಿ ಕನಕಪುರ ದೇಗುಲಮಠದ ಪೂಜ್ಯಶ್ರೀಗಳು, ಬೆಟ್ಟಹಳ್ಳಿ ಮಠದ ಪೂಜ್ಯಶ್ರೀಗಳು, ಮೇದಿನಿಮಠದ ಪೂಜ್ಯ ಶ್ರೀಗಳು, ಶ್ರೀಮಠದ ಅಧ್ಯಕ್ಷರಾದ ಪೂಜ್ಯ ಶ್ರೀ ಸಿದ್ಧಲಿಂಗಸ್ವಾಮಿಗಳು, ಹರಳೂರು ಮಠದ ಪೂಜ್ಯ ಶ್ರೀಗಳು, ಮುಂತಾಗಿ ಆಗಮಿಸಿದ ಸಭೆಯ ಪಾವಿತ್ರ್ಯತೆಯನ್ನು ಸಂವರ್ಧಿಸಿತ್ತು. ಪಾರಂಪರಿಕವಾಗಿ ದೇವರಾಯಪಟ್ಟಣದ ಗೌಡರು ವಿಧಿವತ್ತಾಗಿ ಬನ್ನಿಮರವನ್ನು ಕಡಿದು ಸಮಾರಂಭಕ್ಕೆ ಮುಕ್ತಾಯವನ್ನು ತರುವಲ್ಲಿ ಯಶಸ್ವಿಯಾದರು. ಕೊನೆಯಲ್ಲಿ ಶ್ರೀ ಡಿ.ಎಸ್. ನಾಗರಾಜು ವಂದನೆ ಸಲ್ಲಿಸಿದರು. ಕಾರ್ಯಕ್ರಮವನ್ನು ಶ್ರೀ ಹೆಚ್.ವಿ. ವೀರಭದ್ರಯ್ಯನವರು ನಿರೂಪಿಸಿದರು. ಪರಮಪೂಜ್ಯ ಶ್ರೀ ಶ್ರೀಗಳು ಭಕ್ತಾಧಿಗಳಿಗೆ ಬನ್ನಿ ಪತ್ರೆ ನೀಡಿ ಆಶೀರ್ವದಿಸಿದರು. ಆಗಮಿಸಿದ್ದ ಭಕ್ತಾಧಿಗಳಿಗೆ ದಾಸೋಹ ವ್ಯವಸ್ಥೆ ಮಾಡಲಾಗಿತ್ತು.

## ಹಣ್ಣುಗಳೂ ಕವಚದ ಬೀಜಗಳೂ (ನಟ್ಸ್)

-ವಾಮನರಾವ್ ಹೊದಿಕೆ *

ಬಾಳೆಹಣ್ಣು, ಪಪ್ಪಾಯಿ: ಇವು ಇಡೀ ವರ್ಷದಲ್ಲಿ ಸಿಗುವ ಫಲಗಳು. ಬಚ್ಚಲ ನೀರಿನಿಂದಲೂ ಸಹ ಬೆಳೆಸಬರುತ್ತವೆ.

ಪೇರಲ, ಮಾವು, ಹಲಸು, ಗೇರು: ಇವು ಸಹ ವಿಪುಲವಾಗಿ ಸಿಗುತ್ತವೆ. ಎಂಥ ಸ್ಥಳದಲ್ಲಿಯೂ ಬೆಳೆಯುತ್ತವೆ. ಕಲಮಿ ಮಾವಿನ ಹಣ್ಣು ಬಾಯಿಗೆ ರುಚಿ ಇರುತ್ತದೆ ನಿಜ. ಆದರೆ ಸೀಪಿ ತಿನ್ನುವ ರಸ ಭರಿತವಾದ ಸಿಹಿ ಹುಳಿ ಹಣ್ಣೇ ಹೆಚ್ಚು ಆರೋಗ್ಯಕರ. ಗಟ್ಟಿ ಅಳಲನ್ನು ಸಹ ಹಿಚುಕಿ ರಸಮಾಡಿ ಚಮಚೆಯಿಂದ ಸೀಪಿ ಸೇವಿಸಿದಲ್ಲಿ ಅಡ್ಡಿ ಇಲ್ಲ. ಅನಾನಸ್, ದಾಳಿಂಬ, ಚಿಕ್ಕು, ಸೀತಾಫಲ: ಇವೂ ಸಾಕಷ್ಟು ಸಿಗುತ್ತಿರುತ್ತವೆ. ಅತ್ತಿ, ಬೋರೆ, ನೇರಲ, ಕಂಚಿ, ಅಮಟೆ, ಬೆಳವಲ ಇವೂ ಅಡ್ಡಿ ಇಲ್ಲ. ಟಮೊಟೊ, ದ್ರಾಕ್ಷಿ, ಸೇಬು, ಕಬ್ಬು, ಕಲ್ಲಂಗಡಿ ಇವಂತೂ ಉತ್ತಮ ಆಹಾರ. ತೆಂಗಿನಕಾಯಿ, ವಿಳೆಕಾಯಿಯ ನೀರು ತುಂಬಾ ಪೌಷ್ಟಿಕ ಮತ್ತು ಆರೋಗ್ಯಕರ. ಲಿಂಬೆ, ಕಿತ್ತಳೆ, ಮೋಸಂಬಿ ಇವು ಸಿಹಿ ಹುಳಿ ರಸಭರಿತ ಹಣ್ಣು. ರೋಗಿಗಳಿಗಂತೂ ಅಮೃತ ಆಹಾರ. ಖರ್ಜೂರ, ಉತ್ತತ್ತಿ, ಅಂಜೂರ ಈ ಒಣಗಿದ ಹಣ್ಣು ಗಳನ್ನು ಬಿಸ್ಕೀಟು, ಚಾಕಲೇಟ್, ಪೆಪ್ಪರ್‌ಮಿಂಟುಗಳ ಬದಲು ಮಕ್ಕಳಿಗೆ ಕೊಟ್ಟರೆ ಅವುಗಳ ಹಲ್ಲು, ಹೊಟ್ಟೆ ಕೆಡುವುದು ತಪ್ಪೀತು ಮತ್ತು ಅವು ಪರಿಪೂರ್ಣವಾಗಿ ಬೆಳೆದಾವು.

ಶೇಂಗಾ, ಗೇರುಬೀಜ, ಬದಾಮ, ಪಿಸ್ತಾ, ಕೊಬ್ಬರಿ ಇವುಗಳಲ್ಲಿ ಕೊಬ್ಬು ಸಾಕಷ್ಟು ಇದ್ದು ತುಂಬಾ ಪುಷ್ಟಿಕರ. ಕುಂಬಳ ಬೀಜ, ಸೌತೆಯ ಬೀಜ, ಕಲ್ಲಂಗಡಿ ಹಣ್ಣಿನ ಬೀಜ ಮೊದಲಾದವು ಇಷ್ಟೇ ಪುಷ್ಟಕರ ಮತ್ತು ಹಿತಕರ.

ಒಣಗಿಸಿದ ಹಣ್ಣುಗಳನ್ನು ಕೆಲವು ಗಂಟೆ ನೆನೆಸಿಟ್ಟು ಅವು ಸಾಕಷ್ಟು ನೀರು ಕುಡಿದು ಪುಷ್ಟವಾಗಿಯೂ ಮಿದುವಾಗಿಯೂ ಆದ ತರುವಾಯವೇ ಸೇವಿಸಬೇಕು.

ಜೇನುತುಪ್ಪವಂತೂ ಸರ್ವಶ್ರೇಷ್ಠ ಆಹಾರ. ಅನೇಕ ಜಾತಿಯ ಫಲವೃಕ್ಷಗಳ ಹೂವುಗಳಲ್ಲಿಯ ಹನಿ ಹನಿ ಮಕರಂದವನ್ನು ಸೇರಿಸಿ, ಪಕ್ವಗೊಳಿಸಿದ ರಸಾಯನವೇ ಇದು ಸರ್ವರೋಗ ಪರಿಹಾರಿ.

ಆದರೆ ಪೇಟೆಯಲ್ಲಿ ಡಬ್ಬಗಟ್ಟಲೆ ಬರುವ ಹೆಜ್ಜೇನು ಅಷ್ಟೊಂದು ಹಿತಕರವಲ್ಲ. ಯಾಕೆಂದರೆ ಹೊಗೆಕೊಟ್ಟು, ನೊಣಗಳನ್ನು ಸುಟ್ಟು, ಓಡಿಸಿ ಅವುಗಳ ಹುಟ್ಟನ್ನೇ ಹರಿದು, ಅದರಲ್ಲಿಯ ಮೊಟ್ಟೆಗಳನ್ನೂ, ಮರಿಗಳನ್ನೂ ಹಿಚುಕಿ ಹಿಂಡಿ, ಅದು ತಂದದ್ದಾಗಿರುತ್ತದೆ. ಅದು ತುಂಬಾ ಹಿಂಸೆಯ, ಶೋಷಣೆಯ, ಲೂಟಿಯ ವಸ್ತು. ಆದರ್ಶ ಸಮಾಜಜೀವಿಗಳೂ, ನಿರುಪದ್ರವಿಗಳೂ ಆದ ಜೇನ್ನೊಣಗಳಂಥ ಚಿಕ್ಕಮೂಕ ಜೀವಿಗಳ ಪರಿಶ್ರಮದ ಫಲವನ್ನು, ಕ್ರೂರವಾದ ರೀತಿಯಲ್ಲಿ ಅಪಹರಿಸುವುದು ಅಮಾನುಷ ಕೃತ್ಯವೇ ಸರಿ. ಆದ್ದರಿಂದಲೇ ಅದು ಘೋರ ಹಿಂಸಾಮಯ ಜೇನುತುಪ್ಪ. ನೈತಿಕ ದೃಷ್ಟಿ ಆರೋಗ್ಯದೃಷ್ಟಿ ಎರಡೂ ದೃಷ್ಟಿಗಳಿಂದ ಅದು ತ್ಯಾಜ್ಯ.

ಆದರೆ ಆರೋಗ್ಯಕರವಾದದ್ದು ಅಹಿಂಸಾತ್ಮಕವಾದ, ಪೆಟ್ಟಿಗೆಯಲ್ಲಿ ಸಾಕಿದ, ತುಡವೀ ಜೇನಿನ ತುಪ್ಪ, ಜೇನುನೊಣಗಳನ್ನು ಯಾವುದೇ ರೀತಿಯಲ್ಲಿ ಹಿಂಸಿಸದೆ, ಅವುಗಳ ಮೊಟ್ಟೆ ಮರಿಗಳಿಗೆ ಕೈ ಹಚ್ಚದೆ, ಅವುಗಳ ಹುಟ್ಟನ್ನು ಹರಿದು ಕೆಡಿಸದೆ ಸಂಗ್ರಹಿಸಿದ ಪರಿಶುದ್ಧವಾದ ಜೇನುತುಪ್ಪವೇ ಆರೋಗ್ಯಕರ.

ಸಾಕಿದ ಜೇನುನೊಣಗಳಿಗೆ ಜೇನುತುಪ್ಪ ಸಂಗ್ರಹಿಸಲು ಕೃತ್ರಿಮವಾದ ಮೇಣದ ಹಾಳೆಗಳನ್ನು ಪೂರೈಸಲಾಗುತ್ತದೆ. ಅವುಗಳಿಗೆ ಸಮೀಪದಲ್ಲೇ ಹೆಚ್ಚು ಹೂವುಗಳು ದೊರೆಯುವಂತೆ ಗಿಡಗಳನ್ನು ಬೆಳೆಸಲಾಗುತ್ತದೆ. ಹೊರಗೆ ಹೂವು ಮಕರಂದ ಸಿಗದ ಸಮಯದಲ್ಲಿ ಸಕ್ಕರೆ ಪಾಕವನ್ನು ಪೂರೈಸಿ ಅವುಗಳನ್ನು ಸಾಕಲಾಗುತ್ತದೆ. ಜೇನುತುಪ್ಪ ತೆಗೆಯುವಾಗ ಸಹ, ಅವುಗಳಿಗೆ ಸಾಕಷ್ಟು ಜೇನುತುಪ್ಪ ಹುಟ್ಟಿನಲ್ಲಿ ಇರಿಸಿಯೇ ಮಿಕ್ಕ ಜೇನುತುಪ್ಪ ಮಾತ್ರ ತೆಗೆಯಲಾಗುತ್ತದೆ. ಇದು ಒಂದು ರೀತಿಯಲ್ಲಿ ಸಾಕಿದ ದನಗಳಿಗೆ ಹುಲ್ಲು, ಕಾಳು, ಹಿಂಡಿ ತಿನ್ನಿಸಿ, ಅವುಗಳ ಹಾಲಿನ ಉತ್ಪತ್ತಿ ಹೆಚ್ಚಿಸಿ ಕರುವಿಗೆ ಬೇಕಷ್ಟು ಹಾಲು ಬಿಟ್ಟು, ಹೆಚ್ಚಿನ ಹಾಲನ್ನು ಹಿಂಡಿಕೊಳ್ಳುವಂತೆ ಇರುತ್ತದೆ. ಆದ್ದರಿಂದಲೇ ಇಂಥ ಜೇನುತುಪ್ಪಕ್ಕೆ 'ಅಹಿಂಸಕ ಜೇನುತುಪ್ಪ' ಎಂಬುದು ಮಹಾತ್ಮ ಗಾಂಧಿಯವರು ಕೊಟ್ಟ ಹೆಸರು.

ಜೇನುನೊಣಗಳನ್ನು ಸಾಕುವುದರಿಂದ ತೋಟದಲ್ಲಿಯ ಗಿಡಗಳ್ಗೆ ಹೆಚ್ಚು ಫಲ ಬೇರೆ ಬರುತ್ತದೆ. ಇದೂ ಹೆಚ್ಚಿನ ಲಾಭವೇ. ಗಿಡಗಳಿಗೆ ಹೆಚ್ಚು ಹಣ್ಣು ಬರಲೆಂದೇ ಪಾಶ್ಚಾತ್ಯ ದೇಶಗಳಲ್ಲಿ ಬದು ದೊಡ್ಡ ಪ್ರಮಾಣದಲ್ಲಿ ತೋಟಗಳಲ್ಲಿ ಜೇನುನೊಣಗಳನ್ನು ಸಾಕಲಾಗುತ್ತದೆ. ಜೇನುತುಪ್ಪವು ಅವರಿಗೆ ಉಪ ಆದಾಯ.

ಸಾರಾಂಶ: ಕಿತ್ತಳೆ, ಮೋಸಂಬಿ, ಲಿಂಬೆ, ಅನಾನಸ್, ದ್ರಾಕ್ಷಿ, ಕಲ್ಲಂಗಡಿ, ಟೊಮೊಟೋ ಇವು ರಸಭರಿತ ಹಣ್ಣು. ಈ ಫಲದ ರಸ ರೋಗಿಗಳಿಗೂ, ಬಾಲಕರಿಗೂ, ಅಶಕ್ತರಿಗೂ ತುಂಬಾ ಹಿತಕರ. ಗಿಡದಮೇಲೆ ಪಕ್ವವಾದ ಟೊಮೊಟೊ ಪ್ರತಿನಿತ್ಯ ತಿನ್ನಬೇಕು. ಟೊಮೊಟೋ ಹಣ್ಣಿನ ಗುಣಗಾನ ಎಷ್ಟು ಮಾಡಿದರೂ ಕಡಿಮೆ. ಜೇನುತುಪ್ಪವಂತೂ ಸಾಕ್ಷಾತ್ ಅಮೃತವೇ. ಸದಾಕಾಲದಲ್ಲೂ ಅತ್ಯಲ್ಪ ಪ್ರಮಾಣದಲ್ಲಿ ಸೇವಿಸಲು ಯೋಗ್ಯವಾದದ್ದು. ಹಣ್ಣುಗಳನ್ನು ಚೆನ್ನಾಗಿ ತೊಳೆದೇ ಉಪಯೋಗಿಸಬೇಕು.

-ಮುಂದಿನ ಸಂಚಿಕೆಯಲ್ಲಿ

* ನಿಸರ್ಗ ಚಿಕಿತ್ಸಾ ಸಮಿತಿ. ಬೆಂಗೇರಿ, ಹುಬ್ಬಳ್ಳಿ.







## ತೀವ್ರರೋಗಗಳಲ್ಲಿ ನಿಸರ್ಗೋಪಚಾರ *

-ಜಿ.ವಿ. ವೆಂಕಟನಾರಾಯಣ ಶಾಸ್ತ್ರಿ

**ಇನ್‌ಫ್ಲುಯೆಂಜಾ (Influenza)**

ಸಾಧಾರಣರಿಗೆ ಅರ್ಥವಾಗುವ ಭಾಷೆ 'ಫ್ಲೂ'. ಇದು ಮೊದಲನೆಯ ವಿಶ್ವಯುದ್ಧದ ಕಾಲದಲ್ಲಿ ಲಕ್ಷಾಂತರ ಜನರನ್ನು ಬಲಿ ತೆಗೆದುಕೊಂಡ ಕಾಯಿಲೆ. ಈಚೆಗೆ ಅದಕ್ಕೆ ಈ ಭೀಕರತೆ ಇಲ್ಲ. ಇದು ಒಂದು ಸಾಂಕ್ರಾಮಿಕ ರೋಗ. ಎಲ್ಲಾ ವಯಸ್ಸಿನವರಿಗೂ ಬರುವುದುಂಟು.

**ಲಕ್ಷಣಗಳು :** ಇದು ಹೇಳದೇ ಕೇಳದೇ ತಕ್ಷಣವೇ ಆಕ್ರಮಿಸುತ್ತದೆ. ಚಳಿ, ಜ್ವರ, ತಲೆನೋವು, ಅತಿಯಾದ ಮೈಕೈನೋವು, ಗಂಟಲುನೋವು, ಬೆನ್ನುನೋವು, ಕೆಮ್ಮು, ಸೀನು, ಸೋರುವ ನೆಗಡಿ, ಸುಸ್ತು, ನಿಶ್ಶಕ್ತಿ ಇತ್ಯಾದಿಗಳು ಇದರ ಮುಖ್ಯ ಲಕ್ಷಣ ಗಳು. ಸಾಮಾನ್ಯವಾಗಿ ಜ್ವರವು 102$^0$ಎಫ್ ನಿಂದ 105 ಎಫ್‌ವರೆವಿಗೂ ಏರುವ ಸಾಧ್ಯತೆ ಇದೆ. ಹಾಗೆಯೇ ಮೂರು ದಿನಗಳಿಂದ ಒಂದು ವಾರದವರೆವಿಗೂ ಇರಬಹುದು.

**ಕಾರಣ :** ಇದಕ್ಕೆ ಕಾರಣ ವೈರಸ್ ಎಂದು ನಿರ್ಧರಿಸಲಾಗಿದೆ. ಇದು ಮೂಗು ಗಂಟಲುಗಳನ್ನೆಲ್ಲಾ ಆಕ್ರಮಿಸಿ ಶ್ವಾಸಕೋಶದವರೆವಿಗೂ ಹೋಗುವ ಸಾಧ್ಯತೆಯಿದೆ. ಈ ಜ್ವರವಿರುವಲ್ಲಿ ವೈರಸ್ ಇರುವುದು ಸಹಜವಾದರೂ ಅದು ಆಕ್ರಮಿಸಲು ಕಾರಣ ಮಲಸಂಗ್ರಹವೆಂದು ನಿಸರ್ಗೋಪಚಾರದ ನಿಲುವು. ಆಹಾರ ಸೇವನೆಯಲ್ಲಿನ ತಪ್ಪುಗಳು, ಹೆಚ್ಚಿದ ಕೆಲಸ, ರಾತ್ರಿ ಹೆಚ್ಚು ಹೊತ್ತು ಎದ್ದಿರುವುದು, ವ್ಯಾಯಾಮರಹಿತ ಜೀವನ, ಶುದ್ಧಗಾಳಿಯಿಲ್ಲದ ರೂಮಿನಲ್ಲಿ ವಾಸ, ಅನೇಕ ದಿನಗಳ ಈ ರೀತಿಯ ಜೀವನದಿಂದ ಶರೀರದಲ್ಲಿ ಮಲಸಂಗ್ರಹಣೆ. ಅದು ವೈರಸ್‌ಗೆ ಆಕರ್ಷಣೆ. ಇಂತಹ ವಾತಾವರಣದಲ್ಲಿ ಅವು ಬೆಳೆಯಲು ಸಿಕ್ಕುವುದು ಒಳ್ಳೆಯ ಪೋಷಣೆ.

**ನಿಸರ್ಗೋಪಚಾರ:** ಸಾಧಾರಣ ಜ್ವರದಲ್ಲಿ ಹೇಳಿರುವ ಉಪಚಾರಗಳನ್ನು ಇದರಲ್ಲಿಯೂ ಮಾಡಬೇಕು. ಅದಕ್ಕಿಂತ ಹೆಚ್ಚು ದಿನಗಳ ಕಾಲ ಜ್ವರವು ಮುಂದುವರೆಯುವ ಸಾಧ್ಯತೆ ಇದೆ. ಸಂಜೆ ಹಾಗೂ ರಾತ್ರಿಯ ವೇಳೆ ವೈರಸ್‌ಗಳು ಹೆಚ್ಚಾದಾಗ ಜ್ವರ ಹೆಚ್ಚಿ ಬೆಳಗಿನಲ್ಲಿ ಕಡಿಮೆಯಿರುವ ಸಾಧ್ಯತೆಯೂ ಇದೆ, ಗಾಬರಿಪಡುವ ಅವಶ್ಯಕತೆ ಇಲ್ಲ. ಆ ಉಪಚಾರಗಳನ್ನೇ ಮಾಡುತ್ತಿರಬೇಕು. ಜ್ವರ ಬಿಟ್ಟ ನಂತರ ಒಂದೆರಡು ದಿನ ಬರೀ ಹಣ್ಣಿನ ರಸದಲ್ಲಿರಬೇಕು. ನಂತರ ಬೇಯಿಸಿದ ತರಕಾರಿಗಳು.

**ಮನೆಮದ್ದು :** 1. ೧ ಚಮಚ ಶುಂಠಿರಸ+ಕರಿಮೆಣಸಿನ ಪುಡಿ+ಬಿಸಿನೀರು+ಜೇನುತುಪ್ಪ ದಿನಕ್ಕೆ ಮೂರುಬಾರಿ.

2. ತುಳಸಿಯ ಕಷಾಯ : ೧/೨ ಲೀಟರ್ ನೀರಿಗೆ ೧ ಗ್ರಾಂನಷ್ಟು ಹಸಿಯದಾಗಲಿ, ಒಣಗಿಸಿದ ತುಳಸಿಯ ಪುಡಿಯನ್ನು ಹಾಕಿ, ಅದಕ್ಕೆ ಒಂದು ಚೂರು ಶುಂಠಿ. ನೀರು ಅರ್ಧಕ್ಕೆ ಇಳಿಯುವವರೆವಿಗೂ ಕುದಿಸುವುದು. ಕಷಾಯ ಬಿಸಿಯಾಗಿರುವಾಗಲೇ ಒಂದು ಸಣ್ಣ ಲೋಟ ಕಷಾಯಕ್ಕೆ ಜೇನುತುಪ್ಪ ಸೇರಿಸಿ ಕುಡಿಯುವುದು. ದಿನಕ್ಕೆ ಮೂರು ಸಲ. ೩. ಒಂದು ಬೆಳ್ಳುಳ್ಳಿಯ ರಸ ತೆಗೆಯುವುದು, ಒಂದು ಲೋಟ ನೀರು ಬೆರೆಸಿದ ಹಾಲಿಗೆ ಹಾಕುವುದು, ಒಂದು ಚಿಟಿಕೆ ಒಳ್ಳೆಯ ಅರಿಶಿನದ ಪುಡಿ. ದಿನಕ್ಕೆ ಮೂರು ಬಾರಿ ಕುಡಿಸುವುದು.

**ಮಲೇರಿಯಾ :**

ಸಾಧಾರಣ ಜ್ವರಕ್ಕೆ ನಿಸರ್ಗೋಪಚಾರದ ಪ್ರಯೋಗವನ್ನು ಮಾಡಿದರೂ ಮಾಡಬಹುದು. ಆದರೆ ಮಲೇರಿಯಾದಂತಹ ಜ್ವರಕ್ಕೆ ಈ ಉಪಚಾರವೇ?

ಮಲೇರಿಯಾ ಎಂಬುದು ಇಟಾಲಿಯನ್ ಪದ. 'ಮಲೆ ಏರಿಯಾ' ಅಂದರೆ, 'ಕೆಟ್ಟ ಗಾಳಿ' ಎಂದರ್ಥ. ಹಿಂದೆ ಕೆಟ್ಟ ಗಾಳಿಯಿಂದ ಇದು ಬರುತ್ತದೆಂದು ನಂಬಿದ್ದರು. ಅದಕ್ಕೇ ಈ ಹೆಸರು. ಆದರೆ ಈಗಿನ ನಂಬಿಕೆ, ಇದಕ್ಕೆ ಕಾರಣ ಪ್ಲಾಸ್ಮೋಡಿಯಂ ಎಂಬ ಪರತಂತ್ರ ಜೀವಿ. ಅನಾಫಿಲಿಸ್ ಎಂಬ ಒಂದು ಜಾತಿಯ ಹೆಣ್ಣು ಸೊಳ್ಳೆಯಲ್ಲಿ ಇದರ

* 'ನಿಸರ್ಗ ಯೋಗಧಾಮ' ನಂ. ೨/೨೦೫೯, ೧೧ನೇ ಕ್ರಾಸ್, ಎಸ್.ಎಸ್.ಪುರಂ, ತುಮಕೂರು -೫೭೨ ೧೦೨.

ಬೆಳವಣಿಗೆ. ಅದು ರಕ್ತಕ್ಕಾಗಿ ಮನುಷ್ಯನನ್ನು ಕಚ್ಚಿದಾಗ ಈ ಜೀವಿಯನ್ನು ಅವನ ಶರೀರಕ್ಕೆ ಬಿಡುತ್ತದೆ. ರಕ್ತವನ್ನು ಬಿಟ್ಟಿ ತೆಗೆದುಕೊಳ್ಳಲು ಅದಕ್ಕೆ ಇಚ್ಛೆಯಿಲ್ಲ. ಅದಕ್ಕಾಗಿ ಈ ಕೊಡುಗೆ! ಮುಂದೆ ಪ್ಲಾಸ್ಮೋಡಿಯಂ ಶರೀರದಲ್ಲಿ ಬೆಳೆಯುತ್ತದೆ, ವಂಶಾಭಿವೃದ್ಧಿಯನ್ನು ಮಾಡಿಕೊಡುತ್ತದೆ. ಅದಕ್ಕಾಗಿ ಮಾಲೀಕನಿಗೆ ಉಡುಗೊರೆ, ಮಲೇರಿಯಾ ಜ್ವರ!

**ಮಲೇರಿಯಾ ನಿರ್ಮೂಲನ :** ಈ ಪ್ರಹಸನ ಬಹಳ ಹಿಂದಿನಿಂದಲೂ ನಡೆಯುತ್ತಲೇ ಇದೆ. ಮಲೇರಿಯಾ ಮತ್ತು ಮಾನವ ಎರಡೂ 'ಮ' ಕಾರಗಳಿಂದಲೇ ಪ್ರಾರಂಭವಾಗುವುದರಿಂದ ಇಬ್ಬರಿಗೂ ಹೆಚ್ಚು ನಂಟು ಅಥವಾ ಗಂಟು! ಮಲೇರಿಯಾ ಬಗ್ಗೆ ಪತ್ರಿಕೆಗಳಲ್ಲಿ ಬರುವ ಹೇಳಿಕೆಗಳನ್ನು ಓದಲು ಸೊಳ್ಳೆಗಳಿಗೇನಾದರೂ ಬಂದಿದ್ದರೆ ಬಹುಶಃ ನಕ್ಕುಬಿಡುತ್ತಿದ್ದವೋ ಏನೋ! ಡಿ.ಡಿ.ಟಿ. ಯನ್ನು ಕಂಡು ಹಿಡಿದ ದಿನವೇ ಎಲ್ಲಾ ಸೊಳ್ಳೆಗಳೂ ನಿರ್ನಾಮವಾಯಿತೆಂದು ಮನುಷ್ಯ ತಿಳಿದ. ಅದರಿಂದ ಮಲೇರಿಯಾ ಭೂಮಿಯಿಂದ ನಿರ್ಗಮಿಸುವುದೆಂದು ಬಗೆದ. ಆದರೆ ನಿಜವಾಗಿ ಆದದ್ದೇನು? ಡಿ.ಡಿ.ಟಿಯೇ ಸೊಳ್ಳೆಯ ಆಹಾರವಾಯಿತು! ಇಂದೂ ಸಹ ಪ್ರತಿವರ್ಷ ಪ್ರಪಂಚದಲ್ಲಿ 27 ದಶಲಕ್ಷ ರೋಗಿಗಳು ಮಲೇರಿಯಾದಿಂದ ನರಳುತ್ತಿದ್ದಾರೆ. ಈಗ ಡಿ.ಡಿ.ಟಿ. ಗಿಂತ ಇನ್ನೂ ಹೆಚ್ಚು ವಿಷಕಾರಿಯಾದ ಔಷಧಗಳು ಸಂಶೋಧಿಸಲ್ಪಟ್ಟಿವೆ. ಅವುಗಳನ್ನೂ ಸೊಳ್ಳೆಗಳು ಜೀರ್ಣಿಸಿಕೊಳ್ಳುತ್ತಾ ಇವೆ. ಪ್ರತಿಯೊಂದು ಜೀವಿಗೂ ಜೀವಿಸುವ ಹಕ್ಕನ್ನು ನಿಸರ್ಗ ನೀಡಿದೆ. ಅದನ್ನು ಮತ್ತೊಂದು ಜೀವಿ ಕಿತ್ತುಗೊಳ್ಳಲಾರದು ಅದು ಬ್ಯಾಕ್ಟೀರಿಯಾ ಆಗಿರಲಿ, ವೈರಸ್ ಆಗಿರಲಿ, ಸೊಳ್ಳೆಯೇ ಆಗಲಿ, ಎಷ್ಟೇ ಸಣ್ಣದಾಗಿರಲೀ, ದೊಡ್ಡದಾಗಿರಲಿ ಅದರ ಹಕ್ಕಿನ ಮೇಲೆ ಬೇರೆಯವರು ಸವಾರಿ ಮಾಡಲಾಗುವುದಿಲ್ಲ. ಹಾಗಾದರೆ ಅವು ನಮ್ಮ ಮೇಲೆ ಸವಾರಿ ಮಾಡಬಹುದೋ? ಹಾಗೆ ಮಾಡಲು ಅವು ಬಂದಿಲ್ಲ. ತಮ್ಮ ಆಹಾರಕ್ಕಾಗಿ ಅಲೆದಾಡುತ್ತಿರುವಾಗ ಕೊಳೆಯಿಂದ ಕೂಡಿದ ಶರೀರ ಸಿಕ್ಕಿದರೆ ಮಾತ್ರ ಅವು ಪ್ರವೇಶಿಸುತ್ತವೆ. ಅವು ನಿಸರ್ಗದ ನಿಯಮವನ್ನು ಧಿಕ್ಕರಿಸಿಲ್ಲ. ಅವನ್ನು ಸಾಯಿಸುವುದು ಪರಿಹಾರವಲ್ಲ. ನಮ್ಮ ಪರಿಸರವನ್ನು ಹಾಗೂ ನಮ್ಮ ಶರೀರವನ್ನು ಶುಚಿಯಾಗಿಟ್ಟುಕೊಳ್ಳುವುದು ಸರಿಯಾದ ಮಾರ್ಗ.

ಬ್ಯಾಕ್ಟೀರಿಯವೂ ಸಹ ಅನುಸರಿಸುವುದು ನಿಸರ್ಗದ
ನಿಯಮ
ಅದರ ಫಲವೇ ಹೆಚ್ಚಿದ ಅದರ ಬಲದ ಮರುಮ
(ಮರ್ಮ)
ಮನುಜ ಮರೆತ ತನ್ನ ಧರುಮ(ಧರ್ಮ)
ಅದಕೆ ಬಂತು ರೋಗನಿರೋಧಕಶಕ್ತಿಯನು
ಕಳೆದುಕೊಳ್ಳುವ ಕರುಮ (ಕರ್ಮ)

ನಮ್ಮ ಹೆಸರನ್ನು ನಾವು ಪಡೆಯಬೇಕಾದರೆ ನಾವೂ ಸಹ ನಿಸರ್ಗದ ನಿಯಮಗಳನ್ನು ಪಾಲಿಸಬೇಕೇ ವಿನಃ ಬೇರೆಯ ಮಾರ್ಗವಿಲ್ಲ.

'....ಮಲೇರಿಯಾದಿಂದ ಭಾರತೀಯರಿಗೆ ಮುಕ್ತಿಯಿಲ್ಲವೇ? ಇದ್ದರೂ ಅದು ರಾಸಾಯನಿಕಗಳ ಮೂಲಕವಲ್ಲ. ಅದು ಕೇವಲ ನೈಸರ್ಗಿಕ ವಿಧಾನಗಳಿಂದ..' –ಡಾ|| ನಾಗಲೋಟಿಮಠ, 'ಮಲೇರಿಯಾ ನಿಯಂತ್ರಣದ ದಾರಿ ಸರಿಯಾಗಿದೆಯೇ?' ಎಂದು ಲೇಖನದಿಂದ, ವಿಜಯ ಕರ್ನಾಟಕ, ೧೭ ಮೇ, ೨೦೧೧.

ಈ ಚಿಂತನೆಯೇ ಸರಿಯಾದ ಮಾರ್ಗ, ಮೊದಲು ಸಾಮಾಜಿಕ ಶುಚಿತ್ವದ ಮೂಲಕ ಸೊಳ್ಳೆಗಳ ನಿಯಂತ್ರಣ. ಜೊತೆ ಜೊತೆಯಲ್ಲಿಯೇ ವೈಯಕ್ತಿಕ ಶುಚಿತ್ವದ ಮುಖಾಂತರ ಶರೀರದ ರೋಗನಿರೋಧಶಕ್ತಿಯ ಹೆಚ್ಚಳ. ಇದು ನಿಜವಾದ ನಿವಾರಣಾ ರೀತಿ. ರೋಗ ಬಂದಿರುವಾಗ ಏನು ಮಾಡಬೇಕು? ಈಗಲೂ ಮೇಲಿನ ನಿಯಮಗಳನ್ನು ಪಾಲಿಸುವುದರ ಜೊತೆಗೆ ನಿಸರ್ಗೋಪಚಾರವನ್ನು ಮಾಡಬೇಕು.

**ಲಕ್ಷಣಗಳು :**

ಅತಿ ಹೆಚ್ಚು ಜ್ವರ, ತಲೆನೋವು, ಜೊತೆಗೆ ನಡುಕ. ಅದು ಬರೀ ಚಳಿಯಲ್ಲ. ಎಷ್ಟು ರಗ್ಗುಗಳನ್ನು ಹೊದಿಸಿದರೂ ಸಹ ಚಳಿಯು ಕಡಿಮೆಯಾಗುವುದಿಲ್ಲ. ಕೆಲವು ಗಂಟೆಗಳ ನಂತರ ಮೈಎಲ್ಲಾ ಬೆವರಿ, ಜ್ವರ ಬಿಟ್ಟುಬಿಡುವುದು. ಎರಡು ದಿನಗಳ ನಂತರವೋ ಅಥವಾ ನಾಲ್ಕು ದಿನಗಳ ನಂತರವೋ ಇದೇ ರೀತಿ ಮತ್ತೆ ಜ್ವರ ಬರುವುದು. ಮಲೇರಿಯಾ ಜ್ವರದಿಂದ ರಕ್ತಹೀನತೆ, ಮೂತ್ರಜನಕಾಂಗದ ಸೋಲು, (Kidney failure) ಅತಿಸಾರ ಕಾಯಿಲೆ.

**ಕಾರಣ :** ಕಾರಣದ ಬಗ್ಗೆ ಚಿಂತಿಸಿ ಆಗಿದೆ. ಅನೈಸರ್ಗಿಕ





ಆಹಾರ, ವಿಹಾರಗವಿಳ ಪರಿಣಾಮವಾಗಿ ಉಂಟಾದ ಕಡಿಮೆಯಾದ ರೋಗನಿರೋಧಕಶಕ್ತಿ, ಅದರಿಂದ ಶರೀರದಲ್ಲಿ ತುಂಬಿದ ಕೊಳೆಯ ವಾತಾವರಣ. ಇದು ಪ್ಲಾಸ್ಮೋಡಿಯಂ ಬೆಳೆಯಲು ಹೇಳಿ ಮಾಡಿಸಿದ ಜಾಗ, ಉಷ್ಣವು ಹೆಚ್ಚಿರುವ ಬೇಸಿಗೆಯಲ್ಲಿ ಇದರ ಪ್ರತಾಪ ಹೆಚ್ಚು, ಮಳೆ ಬಿದ್ದು ತಂಪಾದ ವಾತಾವರಣ ಬಂದರೆ ಈ ರೋಗ ಕಡಿಮೆಯಾಗುವುದು. ಇದು ಮುಖ್ಯವಾಗಿ ಉಷ್ಣವಲಯದ ಕಾಯಿಲೆ.

**ನಿಸರ್ಗೋಪಚಾರ :** ೭ರಿಂದ ೧೫ ದಿನಗಳವರೆವಿಗೂ ಬಿಸಿನೀರಿಗೆ ಕಿತ್ತಲೆರಸ, ನಿಂಬೆಹಣ್ಣು, ಮೂಸಂಬಿಗಳ ರಸಗಳನ್ನು ಹಾಕಿಕೊಂಡು ಆಗಾಗ ಕುಡಿಯುತ್ತಿರಬೇಕು. ಮತ್ತೇನನ್ನೂ ತೆಗೆದುಕೊಳ್ಳಬಾರದು. ಪ್ರತಿದಿನವೂ ಒಮ್ಮೆ ಬೆಚ್ಚನೆಯ ನೀರಿನಿಂದ ಎನಿಮಾ ತೆಗೆದುಕೊಳ್ಳಬೇಕು. ಜ್ವರ ಬಿಟ್ಟ ನಂತರ ಮೂರು ದಿನಗಳ ಕಾಲ ಬರೀ ಹಣ್ಣಿನ ಆಹಾರದಲ್ಲಿರಬೇಕು. ಆಗ ಕಿತ್ತಲೆ, ದ್ರಾಕ್ಷಿ, ಸೇಬು, ಅನಾನಸ್, ಪಪಾಯ, ಜೊತೆಗೆ ಋತುಮಾನದ ಹಣ್ಣುಗಳನ್ನು ತಿಂದುಕೊಂಡಿರಬೇಕು. ಇವುಗಳನ್ನೇ ಬೆಳಿಗ್ಗೆ, ಮಧ್ಯಾಹ್ನ, ರಾತ್ರಿ ತೆಗೆದುಕೊಳ್ಳುವುದು. ಇವುಗಳ ಜೊತೆಗೆ ಹಾಲನ್ನೂ ತೆಗೆದುಕೊಳ್ಳಬಹುದು. ಇದೇ ಆಹಾರವನ್ನು ಸಾಧ್ಯವಾದಷ್ಟು ದಿನಗಳು ಮುಂದುವರಿಸಬೇಕು. ನಂತರ ಬೇಯಿಸಿದ ತರಕಾರಿ, ಕೆಂಪಕ್ಕಿ ಅನ್ನ, ಸೂಖ ಚಪಾತಿ ಇತ್ಯಾದಿಗಳನ್ನು ಹಂತ ಹಂತವಾಗಿ ಕೊಡಲು ಪ್ರಾರಂಭಿಸ ಬೇಕು. ರೋಗಿಯ ಉಪ್ಪಿನಕಾಯಿ, ಚಟ್ನಿ, ಗೊಜ್ಜು ಮುಂತಾದವುಗಳನ್ನು ಉಪಯೋಗಿಸಬಾರದು.

ಜ್ವರವಿರುವ ವೇಳೆಯಲ್ಲಿ ದಿನಕ್ಕೆ ಎರಡು ಸಲ ಶರೀರಕ್ಕೆ ಪೂರ್ಣ ತಣ್ಣೀರಿನ ಪಟ್ಟಿಯನ್ನು ಹಾಕಬೇಕು. ಇದಲ್ಲದೆ ಜ್ವರದಲ್ಲಿ ಹೇಳಿರುವ ಉಪಚಾರಗಳನ್ನು ಮಾಡಬೇಕು. ಜ್ವರವು ಬಿಟ್ಟು ಬಿಟ್ಟು ಬರುವುದರಿಂದ ಪೂರ್ಣ ಗುಣವಾಯಿತೆಂದು ತಿಳಿದು ಮಧ್ಯದಲ್ಲಿಯೇ ಉಪಚಾರವನ್ನು ನಿಲ್ಲಿಸಿಬಿಡಬಾರದು. ಚಳಿಯೂ ಇರುವುದರಿಂದ ಬಿಸಿನೀರಿನ ಕಟಿಸ್ನಾನವನ್ನು ಮಾಡಿಸಬೇಕು. ಜತೆಗೆ ಬಿಸಿನೀರಿನ ಬಾಟಲಿಗಳನ್ನು ಸುತ್ತಲೂ ಇಟ್ಟು ರಗ್ಗನ್ನು ಹೊದ್ದಿಸಬೇಕು.

**ಮನೆ ಮದ್ದು :** ೧) ಚಕೋತದ ಹಣ್ಣಿನ ರಸವನ್ನು ಬಿಸಿನೀರಿಗೆ ಹಾಕಿ ಆಗಾಗ ಕುಡಿಯಲು ಕೊಡಬೇಕು. ೨) ೧/೨ ಚಮಚ ದಾಲ್ಚಿನ್ನಿಯನ್ನು ೧/೨ ಲೀಟರ್ ನೀರಿಗೆ ಬೆರೆಸಿ ಚೆನ್ನಾಗಿ ಕುದಿಸಬೇಕು. ಇದು ಚೆನ್ನಾಗಿ ಕುದ್ದ ನಂತರ ಶೋಧಿಸಿ ಇಟ್ಟುಕೊಳ್ಳಬೇಕು. ಒಂದು ಸಣ್ಣ ಲೋಟಕ್ಕೆ ಸ್ವಲ್ಪ ಬಗ್ಗಿಸಿಕೊಂಡು ೧ ಚಮಚ ಜೇನುತುಪ್ಪ ಬೆರೆಸಿಕೊಂಡು ಕುಡಿಯಬೇಕು. ೩) ಪಟಿಕವನ್ನು ಹುರಿದು ಅದನ್ನು ನೀರಿಗೆ ಹಾಕಿ ಕುಡಿಯಬೇಕು. ೪. ತುಳಸಿ ರಸ + ಕಾಳುಮೆಣಸಿನ ಪುಡಿ ಎರಡನ್ನೂ ಸೇರಿಸಿ ಸ್ವಲ್ಪ ನೀರನ್ನು ಹಾಕಿ ಕುದಿಸಬೇಕು. ಇದನ್ನು ಆಗಾಗ ಕುಡಿಯಬೇಕು.

–ಮುಂದುವರಿಯುತ್ತದೆ.

## ನೆಲ್ಲಿಕಾಯಿ

ಪ್ರತಿದಿನ ನೆಲ್ಲಿಕಾಯಿ ಸೇವಿಸಿದರೆ ಜ್ಞಾಪಕಶಕ್ತಿ ಹೆಚ್ಚುತ್ತದೆ. ದೃಷ್ಟಿದೋಷವೂ ನಿವಾರಣೆಯಾಗುತ್ತದೆ. ಮಲಬದ್ಧತೆ, ನರಗಳ ಬಲಹೀನತೆ ಸಮಸ್ಯೆಗಳಿಗೆ ನೆಲ್ಲಿಕಾಯಿ ಸಿದ್ಧೌಷಧವಾಗಿದೆ ಮತ್ತು ರಕ್ತ ಶುದ್ಧೀಕರಿಸುತ್ತದೆ. ಮೂತ್ರದೊಂದಿಗೆ ರಕ್ತ ಬೀಳುತ್ತಿದ್ದರೆ ನೆಲ್ಲಿಕಾಯಿಯನ್ನು ನುಣ್ಣಗೆ ಅರಿದು ನೀರಿನಲ್ಲಿ ಕದಡಿ ಶೋಧಿಸಿ, ಸಕ್ಕರೆ ಬೆರೆಸಿ ಕುಡಿಯಬೇಕು. ನೆಲ್ಲಿಕಾಯಿ ಎಲೆಗಳ ಕಷಾಯದಿಂದ ಬಾಯಿ ಮುಕ್ಕಳಿಸಿದರೆ ಬಾಯಿಹುಣ್ಣು ದೂರವಾಗುತ್ತದೆ. ಕಿರಿ ನೆಲ್ಲಿಕಾಯಿಯನ್ನು ಉಪ್ಪು ಹಚ್ಚಿಕೊಂಡು ತಿನ್ನುವುದರಿಂದ ತಲೆಸುತ್ತು, ವಾಕರಿಕೆ, ಅಜೀರ್ಣ ನಿವಾರಣೆಯಾಗುತ್ತದೆ. ಪಿತ್ತ ಅಧಿಕವಾಗಿ ಹೊಟ್ಟೆ ನೋವು ಬಂದಿದ್ದರೆ ನೆಲ್ಲಿಕಾಯಿ ರಸವನ್ನು ಸ್ವಲ್ಪ ಸಕ್ಕರೆಯೊಂದಿಗೆ ತೆಗೆದುಕೊಂಡರೆ ಗುಣವಾಗುತ್ತದೆ. ಸ್ವಲ್ಪ ನೆಲ್ಲಿಕಾಯಿ ರಸದೊಂದಿಗೆ ಸ್ವಲ್ಪ ಸಕ್ಕರೆಯನ್ನು ಬೆರೆಸಿ ಸೇವಿಸುವುದರಿಂದ ಪಿತ್ತದೋಷದಿಂದ ಉಂಟಾಗುವ ಹೊಟ್ಟೆನುಲಿತ ಶಮನಗೊಳ್ಳುತ್ತದೆ.

## ಹೀರೇಕಾಯಿ

ಹೀರೇಕಾಯಿ ಅತ್ಯುತ್ತಮವಾದ ತರಕಾರಿ, ರಕ್ತವನ್ನು ವೃದ್ಧಿಗೊಳಿಸುವುದು. ಎಳೆಯದಾಗಿರುವಾಗಲೇ ತಿನ್ನಬೇಕು. ದೇಹದಲ್ಲಿ ಉಷ್ಣತೆಯನ್ನು ನಿಯಂತ್ರಣದಲ್ಲಿಡುವುದು. ಹೀರೇಕಾಯಿ ಸೇವನೆಯಿಂದ ಅಜೀರ್ಣ ದೂರವಾಗುತ್ತದೆ. ಇದು ಬೇಗ ಜೀರ್ಣವಾಗುವುದರಿಂದ ಹೀರೇಕಾಯಿಯನ್ನು ಮಕ್ಕಳಿಗೆ ಸೇವಿಸಲು ನೀಡಬಹುದು.



ಸಚಿವ ಶ್ರೀ ಬಿ.ಎನ್ ಬಚ್ಚೇಗೌಡ ಅವರು ಶ್ರೀಮಠಕ್ಕೆ ಭೇಟಿ ನೀಡಿ ಪೂಜ್ಯ ಪರಮಪೂಜ್ಯ ಶ್ರೀ ಶ್ರೀಗಳವರ ದರ್ಶನಭಾಗ್ಯ ಪಡೆದರು. ಈ ಸಂದರ್ಭದಲ್ಲಿ ತುಮಕೂರು ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿ ಶ್ರೀ ಟಿ.ಆರ್. ಸುರೇಶ್ ಮೊದಲಾದವರು ಉಪಸ್ಥಿತರಿದ್ದರು



ಮಂಡ್ಯ ತಾಲ್ಲೂಕು ಮಾಚಹಳ್ಳಿಯಲ್ಲಿ ಪೂಜ್ಯ ಶ್ರೀಗಳವರ ಗುರುವಂದನಾ ಸಮಾರಂಭ ನಡೆಯಿತು. ಸಮಾರಂಭದಲ್ಲಿ ಹರಗುರು ಚರಮೂರ್ತಿಗಳು ಭಾಗವಹಿಸಿದ್ದರು



ಶ್ರೀಮಠದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ಸಂಯುಕ್ತ ವಿದ್ಯಾರ್ಥಿ ಸಂಘದ ಪ್ರಸಕ್ತ ಸಾಲಿನ ಉದ್ಘಾಟನಾ ಸಮಾರಂಭ ನಡೆಯಿತು. ಈ ಸಂದರ್ಭದಲ್ಲಿ ತುಮಕೂರು ನಗರಸಭಾ ಆಯುಕ್ತರಾದ ಶ್ರೀ ಅನುರಾಗ ತಿವಾರಿಯವರು ಉಪಸ್ಥಿತರಿದ್ದರು



ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯಲ್ಲಿ ಸೇವೆ ಸಲ್ಲಿಸಿ ನಿವೃತ್ತರಾದವರಿಗೆ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಸನ್ಮಾನ ಸಮಾರಂಭ ನಡೆಯಿತು



ದಾನಿಗಳಾದ ಮಲ್ನಾಡ ಫರ್ನೀಚರ್ ಮಾಲೀಕರಾದ ಶ್ರೀ ಮದನಕುಮಾರ್ ಅವರನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಸನ್ಮಾನಿಸಿ ಆಶೀರ್ವದಿಸಿದರು




ಜನಪದ ಕಲಾವಿದರು ಶ್ರೀಮಠಕ್ಕೆ ಭೇಟಿ ನೀಡಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದರ್ಶನ ಪಡೆದರು

Cover printed at : Geetanjali Graphics, B-71, KSSIDC Indl. Area, 6th Block, Rajajinagar, Bengaluru-10. Ph : 2340423